೫-೬

# ಲೋಕ ಪಾವನ ಶಕ್ತಿ

'ದೊಡ್ಡವರದೆಲ್ಲವೂ ದೊಡ್ಡದೆನ್ನುವ ಮಾತು ಸುಳ್ಳಲ್ಲ' ಎಂಬುದು ಕವಿಯಾಡಿದ ಮಾತು. ಇದರ ಪ್ರತ್ಯಕ್ಷ ನಿದರ್ಶನವಾದದ್ದು ನನಗೆ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಗೋಕಾಕಕ್ಕೆ ಬಂದಾಗ. ಸರ್ವಸಂಗ ಪರಿತ್ಯಾಗ ಮಾಡಿ ಸನ್ಯಾಸಿಗಳಾದರೂ ಜನತೆಯ ಕಲ್ಯಾಣಕ್ಕಾಗಿ ಅವರು ದುಡಿಯುತ್ತಿರುವ ಮಹತಿಯನ್ನು ನಾನು ಕೇಳಿದ್ದೆ. ಸನ್ಯಾಸಿಗಳಾದ ಅವರು ಕಟ್ಟಿಕೊಂಡ ಈ ಸಾಮಾಜಿಕ ಸಂಸಾರದ ಬಗ್ಗೆ ನನಗೆ ಅತ್ಯಂತ ಕುತೂಹಲವೂ ಆಗಿತ್ತು. ಈ ಮುನಿವೃತ್ತಿಯ ಒಳಹೊಕ್ಕು ನೋಡಬೇಕೆಂಬ ಅಪೇಕ್ಷೆ ನನ್ನದಾಗಿತ್ತು. ಅವರ ಚಿತ್ತ ಶೋಧನೆಯ ಸಾಧನವನ್ನು ನಾನು ಅಳೆಯಬೇಕಾಗಿತ್ತು. ಚಿತ್ತಶೋಧನೆಯು ಮತಿಚಮತ್ಕಾರವಲ್ಲವೆಂಬುದು ನನಗೆ ಅರಿತ ಮಾತಾಗಿತ್ತು. 'ಬಿತ್ತರದ ಲೋಕಪರಿಪಾಕದಿಂ ಸತ್ಕರ್ಮ ಸಕ್ತಿಯಿಂ ಶುದ್ಧತೆ' ಎಂದು ಹೇಳಿದ ಡಿ.ವಿ.ಜಿ.ಯವರ ತಕ್ಕಡಿಯಲ್ಲಿ ತೂಗಬೇಕಾಗಿತ್ತು.

**ತನುರುಜೆಗೆ ಪಥ್ಯಾನ್ನ , ಬಾಯಚಪಲಕ್ಕಲ್ಲ ;**
**ಮನದ ಶಿಕ್ಷೆಗೆ ಲೋಕ, ಮಮಕಾರಕ್ಕಲ್ಲ ।**
**ಗುಣಚರ್ಯೆ ವಿಶ್ವಸಮರಸಕೆ, ಕಾಮಿತಕ್ಕಲ್ಲ ;**
**ಮುನಿವೃತ್ತಿ ಸೂತ್ರವಿದು ಮಂಕುತಿಮ್ಮ ॥**

**(ಮಂಕುತಿಮ್ಮನ ಕಗ್ಗ - 907)**

ಈ ಮುನಿವೃತ್ತಿಯನ್ನು ಕೈಕೊಂಡ ಶ್ರೀ ಪೇಜಾವರ ಮಹಾಸ್ವಾಮಿಗಳನ್ನು ನಾನು ಅಂತರಂಗದಲ್ಲಿ ಪೂಜಿಸುತ್ತಿದ್ದೆ. ನಾನು ಸ್ಮಾರ್ತನಾದರೂ ನನ್ನ ಚಿರಂಜೀವ ಪ್ರಭಾಕರನನ್ನು ಎರಡು ವರುಷ ಧಾರವಾಡದ ಗುರುಕುಲದಲ್ಲಿಟ್ಟಿದ್ದೆ.

'ನೀತಿನಿಷ್ಠವೂ ಚಾರಿತ್ರ್ಯ ಸಂಪನ್ನವೂ ಧರ್ಮ ಸಂಸ್ಕಾರ ಶೀಲವೂ' ಆದ ನವಜನಾಂಗ ನಿರ್ಮಾಣ ದಲ್ಲಿ ಆಸಕ್ತಿಹೊಂದಿದ ಈ ಲೋಕಪಾವನ ವ್ಯಕ್ತಿಯನ್ನು ಪ್ರತ್ಯಕ್ಷವಾಗಿ ಕಂಡು ಮಾತನಾಡಬೇಕೆಂಬ ನನ್ನ ಆಶೆ ಕೈಗೂಡುವ ಯೋಗ ಬಂದಿರಲೇ ಇಲ್ಲ.

ಅಂದು ಶ್ರೀ ಪೇಜಾವರ ಶ್ರೀಗಳವರು ಗೋಕಾಕಕ್ಕೆ ಬರುವರೆಂಬುದನ್ನು ಕೇಳಿದಾಗ ನನ್ನಲ್ಲಿ ವಿದ್ಯುತ್‌ಸಂಚಾರವಾದಂತಾಯಿತು. ಏನೇ ಆಗಲಿ ಅವರನ್ನು ಕಾಣಬೇಕೆಂದು ನಿರ್ಧರಿಸಿದೆ. ನಾನು

ಸ್ಮಾರ್ತನಾಗಿದ್ದರಿಂದಲೋ ಏನೋ ನಮಗೆ ಸ್ವಾಗತ ಯೋಗ ಸಿಗಲಿಲ್ಲ. ಮರುದಿನ ಅವರನ್ನು ಅವರ ಬಿಡಾರದಲ್ಲಿ ಕಾಣಬೇಕೆಂದು ದೃಢಸಂಕಲ್ಪ ಮಾಡಿದೆ.

ಆ ದಿನ ನಾನು ಎದ್ದ ಮುಹೂರ್ತ ಚೆನ್ನಾಗಿದ್ದಿತೆಂದು ತೋರುತ್ತದೆ. ಚುಮುಚುಮು ನಸುಕಿನಲ್ಲಿ ಶ್ರೀಗಳವರ ಶಿಷ್ಯನೊಬ್ಬನು ಬಂದು ಶ್ರೀಗಳವರು ನಿಮ್ಮ ಮನೆಗೆ ಒಂಬತ್ತು ಗಂಟೆಗೆ ಬರುತ್ತಾರೆ ಎಂದು ಹೇಳಿದನು .

ನನಗೆ ಅಚ್ಚರಿಯಾಯಿತು. ಪೂಜ್ಯತೆ ನೆಲಸಿತು. ನಾನೇ ಅವರನ್ನು ಮೊದಲು ಭೆಟ್ಟಿಯಾಗಿ ಮನೆಗೆ ಕರೆತರುವುದು ಕರ್ತವ್ಯವಾಗಿತ್ತು. ಹಾಗೆ ನಾನು ಭಾವಿಸಿದ್ದೂ ಉಂಟು. ಆದರೆ ಇದೇನು ? ಶ್ರೀಗಳವರೇ ಮನೆಗೆ ಬರುತ್ತಾರೆ. ಈ ಸಂಗತಿಯನ್ನು ಪತ್ನಿ ಸೌ. ಗಂಗಾನಿಗೆ ಹೇಳಿದಾಗ ಅವಳ ಮುಖ ಪ್ರಫುಲ್ಲವಾಯಿತು. ಆ ಕ್ಷಣ ಮನೆಗೆ ಸಾರಣೆ- ಕಾರಣೆ ನಡೆಯತೊಡಗಿತು.

ನಾನು ಶ್ರೀಗಳವರನ್ನು ಅವರ ಬಿಡಾರಕ್ಕೆ ಹೋಗಿ ಕರೆದುಕೊಂಡು ಬರಬೇಕೆನ್ನುವ ಹೊತ್ತಿಗೆ ಅವರು ನಮ್ಮ ಮನೆಯ ಹತ್ತಿರವೇ ಬಂದಿದ್ದರು. ಓ ! ದರಹಸಿತ ಮುಖದ ದೇವಮಂದಾರ ಪುಷ್ಪ ಅರಳಿ ಗಮಗಮಿಸುತ್ತಿತ್ತು. ನಾನು ಮೂಕವಿಸ್ಮಿತವಾಗಿ ಅವರನ್ನು ನೋಡುತ್ತಲೇ ನಿಂತೆ.

ಶ್ರೀಗಳವರು ನಾನು ಬರೆಯುವ ಕೋಣೆಯಲ್ಲಿ ನನ್ನ ಪುಸ್ತಕ ಭಂಡಾರವನ್ನು ನೋಡಿ ಆಶೀರ್ವದಿಸಿದರು. ಸಾಹಿತ್ಯದ ಬಗ್ಗೆ ತಮ್ಮ ವಿಚಾರಗಳನ್ನು ಹೇಳಿದರು.

'ಈಶ ಪ್ರೇರಣೆಯಿಂದ ಹೊರಹೊಮ್ಮುವ ಸಾಹಿತ್ಯವು ಮಾನವ ಕಲ್ಯಾಣಕ್ಕಾಗಿ ಮೀಸಲಾಗಿರಬೇಕು' ಎಂದು ಅಪ್ಪಣೆ ಕೊಡಿಸಿದ ಅವರ ಮಾತು ಮುತ್ತಿನಂತಹದು. ನನ್ನ ಕಾದಂಬರಿಗಳ ಬಗ್ಗೆ, ನನ್ನ ಕವಿತೆಗಳ ಬಗ್ಗೆ ಅವರು ಅರ್ಧ ಗಂಟೆಯವರೆಗೆ ಮಾತನಾಡಿದರು. ಆತ್ಮೀಯತೆಯ ಸುಖಾನುಭವದಲ್ಲಿ ನನ್ನ ಪಾಮರ ಜೀವನವು ಪುನೀತವಾಯಿತು.

ಇದು ಸ್ವಾಮಿಗಳ ಮಹತಿ. ನನಗೂ ಅವರಿಗೂ ಈವರೆಗೆ ಪ್ರತ್ಯಕ್ಷ ಪರಿಚಯವಾಗಿರಲಿಲ್ಲ. ನನ್ನ ಪುಸ್ತಕಗಳನ್ನು ಅವರು ಓದಿದ್ದರೋ ಇಲ್ಲವೊ ನನಗೆ ತಿಳಿಯದು. ಆದರೂ ನನ್ನ ಮನೆ ಹುಡುಕಿಕೊಂಡು ಬಂದದ್ದು ದೊಡ್ಡ ಗುಣವೆಂಬುದನ್ನು ಹೇಳಲೇಬೇಕು. ಇದು ದೇವಗುಣ.

('ನಿವೇದನ' - 'ತತ್ತ್ವವಾದ ' ವಿಶೇಷ ಸಂಪುಟ , ೧೯೭೭.)

●

ಶ್ರೀ-೭

# ವಿಭೂತಿ ಪುರುಷ

ಸರಳವೂ ಅತ್ಯಂತ ಗಂಭೀರವೂ ಆದ ಶ್ರೀ ಶ್ರೀ ಪೇಜಾವರ ಮಠಾಧೀಶರ ವ್ಯಕ್ತಿತ್ವವನ್ನು ಅರ್ಥ ಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಅವರಲ್ಲಿ ಅದಮ್ಯವಾದ ಉತ್ಸಾಹವಿದೆ. ಜನರನ್ನು ಆಕರ್ಷಿಸುವ ಸೌಜನ್ಯವಿದೆ. ವಿದ್ವಾಂಸರನ್ನು ಬೆರಗುಗೊಳಿಸುವ ಪಾಂಡಿತ್ಯ ಪ್ರೌಢಿಮೆ ಇದೆ. ರಾಜಕಾರಣಿಗಳಿಗೂ ಬೆರಗನ್ನುಂಟು ಮಾಡುವ ವ್ಯವಹಾರ ಕೌಶಲವಿದೆ. ಎಲ್ಲಕ್ಕೂ ಮಿಗಿಲಾಗಿ ದೀನದಲಿತರ ಬಗ್ಗೆ ಅಪಾರ ಅನುಕಂಪವಿದೆ. ಈ ಎಲ್ಲ ಕಾರಣಗಳಿಂದಾಗಿ ಅವರ ಕಡೆ ಆಕರ್ಷಿತರಾಗದ ವ್ಯಕ್ತಿಗಳೇ ಇಲ್ಲ.

ಸ್ವಾಮಿಗಳವರು ಪೂರ್ಣಪ್ರಜ್ಞ ವಿದ್ಯಾಪೀಠಕ್ಕೆ ಬಂದು ಬಿಡಾರ ಮಾಡಿದ ಸಂದರ್ಭದಲ್ಲಿ ಅದೊಂದು ಜನರಿಗೆ ಯಾತ್ರಾ ಸ್ಥಳವಾದಂತಿರುತ್ತದೆ. ಹಗಲಿರುಳೂ ಜನ ಅವರ ಬಳಿಗೆ ಬರುತ್ತಿರುವುದು ಸಾಮಾನ್ಯ ವಿಷಯ. ಎಷ್ಟೋ ಸಲ ಪೂರ್ಣಪ್ರಜ್ಞ ವಿದ್ಯಾಪೀಠದ ಕಾರ್ಯದರ್ಶಿಯಾದ ನಾನು ವಿದ್ಯಾಪೀಠದ ಕುಲಪತಿಗಳಾದ ಶ್ರೀ ಸ್ವಾಮೀಜಿಯವರಲ್ಲಿ ಕೆಲವು ಮುಖ್ಯ ವಿಚಾರಗಳನ್ನು ಚರ್ಚಿಸಬೇಕೆಂದು ಕಾದಿದ್ದರೂ ಅವಕಾಶ ಸಿಗದೆ ನಿರಾಶನಾಗಿದ್ದುಂಟು.

ಮಹಾತ್ಮಾ ಗಾಂಧೀಜಿಯವರು ಬ್ರಿಟಿಷರ ಆಳ್ವಿಕೆಯಿಂದ ಭಾರತವನ್ನು ವಿಮೋಚನಗೊಳಿಸಲು ಕಾಂಗ್ರೆಸ್ ಸಂಸ್ಥೆಗೆ ಅನೇಕ ರಚನಾತ್ಮಕ ಕಾರ್ಯಗಳನ್ನು ಹಾಕಿ ಕೊಟ್ಟು ಅದರ ಮಾರ್ಗದರ್ಶನವನ್ನು ಮಾಡಿದರು. ಇದರಿಂದ ಸಮಾಜದ ಜಡತ್ವವು ತೊಲಗಿತು. ಸಮಾಜ ಎಚ್ಚರಗೊಂಡಿತು. ಪರಿಣಾಮವಾಗಿ ಭಾರತ ಸ್ವತಂತ್ರವಾಯಿತು. ಈಗ ಒಂದೊಂದಾಗಿ ಮಹಾತ್ಮರು ಹಾಕಿಕೊಟ್ಟ ರಚನಾತ್ಮಕ ಕಾರ್ಯಗಳು ಮೂಲೆಗುಂಪಾಗುತ್ತಿವೆ. ಈಗ ಸ್ವತಂತ್ರ ಭಾರತವು ಬೇರೊಂದು ಜಾಡನ್ನು ಹಿಡಿದು ಸಾಗುತ್ತಿದೆ.

ಸ್ವಾಮೀಜಿಯವರು ಈ ದುಸ್ಥಿತಿಯನ್ನು ಮನಗಂಡಿದ್ದಾರೆ. ಆದ್ದರಿಂದಲೇ ಮೊನ್ನೆ ಅವರಿಗೆ ಸಾರ್ವಜನಿಕ ಸನ್ಮಾನವನ್ನು ಬೆಂಗಳೂರು ನಾಗರಿಕರು ಕೊಟ್ಟಾಗ ಹೇಳಿದರು – ನಾವು ಈಗ ಭಾರತದ ಉನ್ನತ ಧ್ಯೇಯೋದ್ದೇಶಗಳನ್ನು ಮರೆತು ಪಾಶ್ಚಿಮಾತ್ಯರ ಬೆಡಗಿನ ಜೀವನಕ್ಕೆ ಮಾರುಹೋಗುತ್ತಿದ್ದೇವೆ. ಪಾಶ್ಚಿಮಾತ್ಯರ ದೃಷ್ಟಿ ಭೋಗ ಪ್ರಧಾನವಾದ ಸಂಸ್ಕೃತಿಗೆ ಜನ್ಮವಿತ್ತಿದೆ. ಭೋಗ ಪಶು ಜೀವನದಲ್ಲೂ ಇದೆ. ಆದರೆ ಈಗಿನ ವಿಜ್ಞಾನವು ಈ ಭೋಗ ಜೀವನಕ್ಕೆ ಬಂದೊದಗಬಹುದಾದ ನೈಸರ್ಗಿಕ ಅಡ್ಡಿ ಆತಂಕಗಳನ್ನು ದೂರಮಾಡಿ ಅಬಾಧಿತ ಭೋಗಕ್ಕೆ ಎಡೆಮಾಡಿ ಕೊಟ್ಟಿದೆ. ಅಂದರೆ ಮೊದಲೇ ಪಶುವಾಗಿದ್ದ ಮಾನವನನ್ನು ಮತ್ತಷ್ಟು ಪಶುವನ್ನಾಗಿ ಮಾಡಲು ಹವಣಿಸಿದೆ. ಭಾರತೀಯ ಋಷಿಮುನಿಗಳ ದೃಷ್ಟಿ ಇದಕ್ಕೆ ವಿರುದ್ಧವಾದುದು.

ಮಾನವನನ್ನು ಪಶುವಿನ ಧರಾತಲದಿಂದ ಮೇಲೆತ್ತಿ, ಆಧ್ಯಾತ್ಮದತ್ತ ಕರೆದೊಯ್ಯುವುದಾಗಿದೆ. ಸ್ವತಂತ್ರ ಭಾರತವು ಈ ಕಡೆ ಲಕ್ಷ್ಯ ಕೊಡಬೇಕು.''

ಈ ರೀತಿ ಸ್ಪಷ್ಟ ಭಾಷಣವನ್ನು ಮಾಡಿ ಸಮಾಜವನ್ನು ಎಚ್ಚರಿಸುವ ಸಾಮರ್ಥ್ಯವು ಸ್ವಾಮಿಗಳಿಗೆ ಕೇವಲ ಅಧ್ಯಯನದಿಂದ ಬಂದುದಲ್ಲ. ಅಥವಾ ಅಂಥ ಮಾತುಗಳನ್ನು ಅಂಧಶ್ರದ್ಧೆ ಅಥವಾ ದುರಭಿಮಾನ ದಿಂದ ಆಡಿದುದಲ್ಲ. ಅದು ಅವರು ಕರ್ಣಧಾರರಾಗಿ ನಿಂತು ನಡೆಸಿಕೊಂಡು ಬರುತ್ತಿರುವ ಹಲವಾರು ರಚನಾತ್ಮಕ ಕಾರ್ಯಕ್ರಮಗಳ ಯಶಸ್ವಿಗಾಗಿ ಅಹರ್ನಿಸಿ ತಪಸ್ಸು ಗೈಯುತ್ತಿರುವ ಕಾರಣ ಅನುಭವದಿಂದ ಪಡೆದದ್ದು. ಅದನ್ನು ಅವರು ನಿರ್ದಾಕ್ಷಿಣ್ಯವಾಗಿ ಸಾರಿ ಸಾರಿ ಹೇಳುತ್ತಿದ್ದಾರೆ.

ಈಗ ಹನ್ನೆರಡು ವರ್ಷಗಳ ಹಿಂದೆ ಪೂರ್ಣಪ್ರಜ್ಞ ವಿದ್ಯಾಪೀಠದ ಸ್ಥಾಪನೆಯ ಸಂದರ್ಭದಲ್ಲಿ ನಮ್ಮ ಸಮಾಜ ಮತ್ತು ಸರಕಾರವನ್ನು ಎಚ್ಚರಿಸುತ್ತ ಅವರು ಆಡಿದ ಮಾತುಗಳು ಇಂದಿಗೂ ಕಿವಿಯಲ್ಲಿ ಮೊಳಗುತ್ತಿವೆ. 'ನಮ್ಮ ಸರಕಾರಕ್ಕೆ ಅಳಿದು ಹೋಗುತ್ತಿರುವ ಕಾಡುಮೃಗಗಳ ತಳಿಯನ್ನು ವಿಶೇಷವಾಗಿ ಬಿಳಿಯ ಹುಲಿಯ ತಳಿಯನ್ನು ರಕ್ಷಿಸುವಲ್ಲಿರುವಷ್ಟು ಕಳಕಳಿಯೂ ಸಹ ಅಳಿದುಹೋಗುತ್ತಿರುವ ಪ್ರಾಚೀನ ಭಾರತೀಯ ಸಂಸ್ಕೃತಿ, ಸಾಹಿತ್ಯ ಹಾಗೂ ದರ್ಶನದ ಆಳವಾಗಿ ಅಭ್ಯಾಸ ಮಾಡಿದ ಪಂಡಿತರ ತಳಿಯ ಬಗ್ಗೆ ಇಲ್ಲವಾಗಿದೆ. ಇದು ಅತ್ಯಂತ ಶೋಚನೀಯ ಸ್ಥಿತಿ. ಅಂತೆಯೇ ಸಮಾಜವೂ ಕೂಡ ಈ ಸರಳ ಜೀವನ ಹಾಗೂ ಉಚ್ಚ ವಿಚಾರಗಳಿಗಾಗಿ ಬಾಳುತ್ತಿರುವ ಪಂಡಿತರನ್ನು ನಿರ್ಲಕ್ಷಿಸಿದೆ. ಹಾಗಿಲ್ಲದೇ ಹೋದ ಪಕ್ಷಕ್ಕೆ ಈ ಸಮಾಜಕ್ಕೆ ದುಸ್ಥಿತಿ ಬಂದೊದಗಲು ಕಾರಣವೇನು? ಈಗ ಎಚ್ಚರಗೊಳ್ಳಬೇಕು; ಇಲ್ಲವಾದಲ್ಲಿ ಇನ್ನಷ್ಟು ಅಧೋಗತಿಗಿಳಿದೇವು' ಎಂದು ತಿಳಿಸಿದ್ದರು.

ಬೆಂಗಳೂರಿನ ಮಾಧ್ವ ಸಂಘದಲ್ಲಿ ಅವರು ಪ್ರಸ್ಥಾನತ್ರಯಗಳಲ್ಲಿ ಯಾವುದಾದರೊಂದು ವಿಷಯವನ್ನು ಆರಿಸಿಕೊಂಡು ಅಸ್ಖಲಿತವಾಣಿಯಲ್ಲಿ ಗಂಭೀರವಾಗಿ ತಿಂಗಳುಗಟ್ಟಲೆ ಪ್ರವಚನ ಮಾಡಿದುದನ್ನು ಕೇಳಿದ್ದೇನೆ. ಗಂಭೀರ ವಿಷಯವನ್ನು ದೃಷ್ಟಾಂತ ಪುರಸ್ಸರವಾಗಿ ಸರಳ ಶೈಲಿಯಲ್ಲಿ ಪ್ರತಿಪಾದಿಸುವುದು ಅವರಿಗೇ ಮೀಸಲಾದುದೆನ್ನಬಹುದು.

ಒಮ್ಮೆ ಬೆಂಗಳೂರಿನ ಕಲ್ಯಾಣಿ ರಾಘವೇಂದ್ರ ಸ್ವಾಮಿಗಳ ಮಠದಲ್ಲಿ ಒಂದು ವಿಶಿಷ್ಟ ಚರ್ಚಾಕೂಟ ನಡೆಯಿತು. ಶ್ರೀಗಳು ಅಧ್ಯಕ್ಷಸ್ಥಾನವನ್ನಲಂಕರಿಸಿದ್ದರು. ವಿಷಯದ ಪರವಾಗಿ ಹಾಗೂ ವಿರೋಧವಾಗಿ ಮಾತನಾಡಲು, ಶ್ರೀಯುತರಾದ ಎಂ. ಪಿ. ಎಲ್. ಶಾಸ್ತ್ರಿಗಳು, ಪ್ರೊ। ಬಿ. ವೆಂಕಟೇಶಾಚಾರ್ಯರು ಮೊದ ಲಾದ ಗಣ್ಯ ವ್ಯಕ್ತಿಗಳು ಒಪ್ಪಿಕೊಂಡಿದ್ದರು. ''ಖಂಡನ ಮಂಡನ ಸಾಹಿತ್ಯವು ಸಾಕು'' ಎಂಬುದು ಚರ್ಚಾ ವಿಷಯವಾಗಿತ್ತು. ಬಹು ಗಂಭೀರವಾಗಿ ವಿಷಯ ಮಥನವಾಯಿತು. ಸಭಿಕರು ಒಂದೊಂದು ಭಾಷಣವನ್ನು ಮೆಚ್ಚಿ ತಲೆದೂಗಿದರು. ಕಟ್ಟಕಡೆಯದಾಗಿ ಅಧ್ಯಕ್ಷರ ಭಾಷಣದಲ್ಲಿ ಹೊಸ ವಿಷಯ ವೇನಿರಲು ಸಾಧ್ಯ ಎಂದು ಜನ ಕಾತರರಾಗಿದ್ದರು. ಆಗ ಸ್ವಾಮಿಗಳು 'ವಿಜ್ಞಾನದ ಕ್ಷೇತ್ರದಲ್ಲಿ ಸಾಕ್ಷ್ಯಾಧಾರ ಗಳನ್ನಿಟ್ಟುಕೊಂಡು ಒಬ್ಬನು ತನಗೆ ತೋರಿದ ಸತ್ಯವನ್ನು ಸಿದ್ಧಾಂತವೆಂದು ಪ್ರತಿಪಾದಿಸುತ್ತಾನೆ. ಅದನ್ನು ಇತರರು ಪರೀಕ್ಷಿಸಿ, ಸರಿ ಬಂದಲ್ಲಿ ಒಪ್ಪಿಕೊಳ್ಳುತ್ತಾರೆ. ಆದರೆ ಎಷ್ಟೋ ಸಲ ಹೊಸ ಅನುಭವ ಬಂದಾಗ ಹಳೆಯ ಸಿದ್ಧಾಂತವನ್ನು ಕೈಬಿಡಬೇಕಾದ ಪ್ರಸಂಗಗಳು ಬಂದೊದಗಿವೆ. ಅಂತಹ ಸಂದರ್ಭದಲ್ಲಿ ಹಳೆಯದನ್ನು ಗೌರವದಿಂದ ತ್ಯಜಿಸಿ ಹೊಸದನ್ನು ವಿಶ್ವದ ವಿಜ್ಞಾನಿಗಳೆಲ್ಲ ಒಪ್ಪಿಕೊಂಡು ಬಂದಿದ್ದಾರೆ. ವಿಜ್ಞಾನದ ಬೆಳವಣಿಗೆಗೆ ಖಂಡನ ಮಂಡನ ಪ್ರವೃತ್ತಿ ಕಾರಣವಷ್ಟೇ ಅಲ್ಲ ಅದು ಸಾಧನವಾಗಿದೆ. ಅದೇ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರತಿಯೊಬ್ಬ ಆಚಾರ್ಯನೂ ತನ್ನ ಅನುಭವಕ್ಕೆ ತಕ್ಕಂತೆ ವೇದಶಾಸ್ತ್ರಾದಿ ಗಳನ್ನಿಟ್ಟುಕೊಂಡು ಒಂದೊಂದು ಸಿದ್ಧಾಂತವನ್ನು ಪ್ರತಿಪಾದಿಸಿರುತ್ತಾನೆ. ಅದನ್ನು ಪರೀಕ್ಷಿಸದೆ ಒಪ್ಪಿಕೊಳ್ಳುತ್ತ ಬಂದಿದ್ದರೆ ಖಂಡನ ಮಂಡನ ಸಾಹಿತ್ಯವು ಬೆಳೆಯುತ್ತಲೇ ಇರಲಿಲ್ಲ. ಆದರೆ ಅದು ವೈಜ್ಞಾನಿಕ ದೃಷ್ಟಿಯೇ ? ಅಂಧಶ್ರದ್ಧೆಯು ಎಂದಿಗೂ ಜ್ಞಾನಕ್ಕೆ

ಸಾಧನವಾಗಲಾರದು. ಆದರೆ ಈ ಅಂಧಶ್ರದ್ಧೆಯನ್ನು ಬಿಡದೆ ಜ್ಞಾನ ಸಾಧನಗಳನ್ನು ತಮ್ಮ ತಮ್ಮ ಆಚಾರ್ಯರ ಸಿದ್ಧಾಂತದ ಮಂಡನೆಗೆ ಅನ್ಯರ ಸಿದ್ಧಾಂತದ ಖಂಡನೆಗೆ ಉಪಯೋಗಿಸಿಕೊಂಡ ಕಾರಣದಿಂದಲೇ ವಿರೋಧ ವೈಷಮ್ಯಗಳು ಬೆಳೆಯಲು ಕಾರಣವಾಯಿತು. ಆಧ್ಯಾತ್ಮಿಕ ಕ್ಷೇತ್ರದಲ್ಲೂ ಸಹ ಅನುಭವಕ್ಕೆ ಅವಿರೋಧವಾಗಿ ವೇದ ಶಾಸ್ತ್ರೋಪನಿಷತ್ತುಗಳನ್ನು ಅರ್ಥಮಾಡಿ ತಿಳಿದುಕೊಳ್ಳುವ ವೈಜ್ಞಾನಿಕ ದೃಷ್ಟಿ ಬೆಳೆದು ಬಂದಿದ್ದರೆ ಈಗಿನ ಗೊಂದಲವೇ ಇರುತ್ತಿರಲಿಲ್ಲ' ಎಂದಿದ್ದರು.

ಅಂತೂ ಪ್ರತಿಯೊಂದು ಭಾಷಣದಲ್ಲೂ ಒಂದಲ್ಲ ಒಂದು ಹೊಸ ತತ್ತ್ವವನ್ನು ಪ್ರತಿಪಾದಿಸುವುದನ್ನು ಕೇಳಿದ್ದೇನೆ. ಇದಕ್ಕೆಲ್ಲ ಆಳವಾದ ಅಧ್ಯಯನ, ಮನನ, ಲೋಕಾನುಭವ ಕಾರಣವೆನ್ನೋಣ. ಆದರೆ ಆಶ್ಚರ್ಯದ ಸಂಗತಿ ಎಂದರೆ ಬೆಳಗಿನಿಂದ ತಮ್ಮ ಜಪ-ತಪಕ್ಕೆ ಗೊತ್ತಾದ ಕಾಲವನ್ನು ಬಿಟ್ಟರೆ ಸದಾ ಒಂದಲ್ಲ ಒಂದು ಕಾರ್ಯದಲ್ಲಿ ವ್ಯಸ್ತರಾಗಿರುತ್ತಾರೆ. ಯಾವಾಗ ಅವರಿಗೆ ಅಧ್ಯಯನಕ್ಕೆ ಅವಕಾಶ ಸಿಗುವುದೋ ದೇವರೇ ಬಲ್ಲ.

ಹೀಗೆಂದರೆ ಇದಕ್ಕೂ ಆಶ್ಚರ್ಯದ ಸಂಗತಿ ಎಂದರೆ ಅವರು ವಿದ್ಯಾಪೀಠದಲ್ಲಿ ಉದ್ಗ್ರಂಥಗಳನ್ನು ಪಾಠ ಹೇಳುತ್ತಾರೆ. ಪ್ರವಚನಕ್ಕೆ ಮನಸ್ಸಿನ ಏಕಾಗ್ರತೆ ಅತ್ಯವಶ್ಯಕ. ಗಂಭೀರವಾದ ವಿಷಯವೆಂದರೆ ತದನುಗುಣವಾದ ಚಿತ್ತೈಕಾಗ್ರತೆಯೂ ಪೂರ್ವ ಸಿದ್ಧತೆಯೂ ಬೇಕು. ಸ್ವಾಮಿಗಳ ಪರಿಸ್ಥಿತಿಯನ್ನು ಕುರಿತು ವಿಚಾರ ಮಾಡಿ ನೋಡೋಣ. ಪೂರ್ಣಪ್ರಜ್ಞ ವಿದ್ಯಾಪೀಠಕ್ಕೆ ಹಣವನ್ನೊದಗಿಸಿ ಕೊಡಬೇಕು. ಇಲ್ಲವೆ ಆ ಸಂಸ್ಥೆಯನ್ನು ಮುಚ್ಚಿಡಬೇಕು. ಅಂಥ ಸ್ಥಿತಿ. ಇದರಂತೆ 'ಹಾಸ್ಟೇಲ' ಕಟ್ಟಡದ ಕಾರ್ಯ ಅರ್ಧಕ್ಕೆ ನಿಂತು ಹೋಗಿದೆ, ಹಣ ಕೂಡಿಸಿ ಕೊಡಬೇಕೆಂದು ಒಬ್ಬರು ಕೇಳುತ್ತಿದ್ದರೆ ಇನ್ನೊಬ್ಬರು 'ವಿದ್ಯಾರ್ಥಿವೇತನವನ್ನು ಕೊಡಲು ಈ ಸಲ ಹಣವಿಲ್ಲದಾಗಿದೆ'' ಎಂಬ ಸಮಸ್ಯೆಯನ್ನು ಒಡ್ಡುವವರು. ಈ ಮಧ್ಯೆ ತಮ್ಮ ಮಠದ ಖರ್ಚು ವೆಚ್ಚಗಳನ್ನು ಸರಿತೂಗಿಸುವ ಸಮಸ್ಯೆ. ಹೀಗೆ ಸಂಸಾರಿಗಳಿಗಿಂತ ಸಾವಿರ ಪಾಲು ಧನಚಿಂತೆಯು ಅವರನ್ನು ಸತಾಯಿಸುತ್ತಿದೆ ಎಂದು ಕಾಣುತ್ತಿರುತ್ತದೆ. ಇಷ್ಟೆಲ್ಲ ಚಿಂತೆ ಇದ್ದರೂ ರೋಗಿಗಳಿಗೆ ಔಷಧೋಪಚಾರವನ್ನು ಕೊಡುವ ಕೃಷ್ಣ ಸೇವಾಶ್ರಮವನ್ನು ತೆರೆದಿರುತ್ತಾರೆ. ಅದರ ಕೊರತೆಯನ್ನು ಭರಿಸಬೇಕು. ಭರಿಸುತ್ತಾ ಬಂದಿದ್ದಾರೆ. ಬಿಹಾರದ ಸಂತ್ರಸ್ತರಿಗೆ ಸಹಾಯವನ್ನೊದಗಿಸಲು ಕಟಿಬದ್ಧರಾದರು. ಅಂದರೆ ಇತರೆ ಎಲ್ಲ ಸಂಸ್ಥೆಗಳನ್ನೂ ಮರೆತರು ಎಂದು ಅರ್ಥವಲ್ಲ. ಅದನ್ನೂ, ಇದನ್ನೂ ಬರಬಹುದಾದುದೆಲ್ಲವನ್ನೂ ಭರಿಸುವೆನೆಂಬ ಉತ್ಸಾಹದ ಮೂರ್ತಿ. ಪೂರ್ಣಪ್ರಜ್ಞ ವಿದ್ಯಾಪೀಠದ ಕಾರ್ಯದರ್ಶಿಯಾಗಿ ನಾನೆಷ್ಟು ಸಲ ಆರ್ಥಿಕ ಮುಗ್ಗಟ್ಟೇ ಮುಂತಾದ ಕಾರಣಗಳಿಂದಾಗಿ ನಿರುತ್ಸಾಹಗೊಂಡು ಅವರ ಬಳಿಗೆ ಹೋಗಿ ದೂರು ಹೇಳಬೇಕೆಂದು ಹೊರಟವನು ಅವರ ಉತ್ಸಾಹವನ್ನು ಕಂಡು ಬಾಯಿ ಬಿಡದೆ, ಕೆಲಸವನ್ನು ಮುಂದುವರಿಸಿಕೊಂಡು ಹೋಗುವ ಸ್ಫೂರ್ತಿಯನ್ನು ಪಡೆದು ಹಿಂತಿರುಗಿದ್ದೇನೆ. ಪ್ರಾಯಃ ಇತರ ಕಾರ್ಯದರ್ಶಿಗಳಿಗೂ ಇಂತಹುದೇ ಅನುಭವವಿರಬಹುದು.

ಇಷ್ಟು ವಿವಿಧ ಚಟುವಟಿಕೆಗಳಲ್ಲಿ ಹತ್ತು ಚಿಂತಾಗ್ರಸ್ತ ಪರಿಸ್ಥಿತಿಯಲ್ಲಿಯೂ ಧೃತಿಗೆಡದೆ, ತಾಳ್ಮೆಯನ್ನು ಕಳೆದುಕೊಳ್ಳದೆ, ಪಾಠಕ್ಕೆ ಕುಳಿತಾಗ ಎಲ್ಲವನ್ನೂ ಮರೆತು ಪ್ರವಚನ ಮಾಡುವುದನ್ನು ನೋಡಿದಾಗ 'ಇದೇ ಅಲ್ಲವೇ ಯೋಗ' ಎಂದುಕೊಂಡಿದ್ದೇನೆ.

ಒಟ್ಟಿನಲ್ಲಿ ಹನುಮೋತ್ಸಾಹವನ್ನೂ ಭೀಮನಂತೆ ಅದೈನ್ಯವನ್ನೂ ಮೈಗೂಡಿಸಿಕೊಂಡಿರುವ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಮಧ್ವಾಚಾರ್ಯರ ತತ್ತ್ವವಾದದಲ್ಲಿ ನಿಷ್ಣಾತ ಪಂಡಿತರೂ ಪ್ರವಚನ ಪಟುಗಳೂ ಕಾರ್ಯದಕ್ಷರೂ ಸ್ಫೂರ್ತಿದಾಯಕರೂ ಸಮಾಜ ಜಾಗೃತಿಗಾಗಿ ಕಟಿಬದ್ಧರೂ ಆದ ವಿಭೂತಿ ಪುರುಷರು.

('ನಿವೇದನ', 'ತತ್ತ್ವವಾದ' ವಿಶೇಷ ಸಂಚಿಕೆ, ೧೯೭೭.)

●

೫-೮

# ಶ್ರೀ ಪೂಜ್ಯಪಾದ ಪೇಜಾವರ ಶ್ರೀಗಳವರು

ಶ್ರೀಕೃಷ್ಣನ ಈ ಕನ್ನಡದ ಕಡಲತೀರ ಭಾರತೀಯ ತತ್ತ್ವ ಪ್ರಪಂಚಕ್ಕೆ ಮೂರು ಮಾಸದ ಮೂಸದ ಹೊಚ್ಚ ಹೊಸ ಕಾಣಿಕೆ ಇತ್ತಿದೆ. ಮೊದಲಿತ್ತ ಕಾಣಿಕೆ ಬೃಹತ್ ಕಾಣಿಕೆ. ನೆಲಮುಗಿಲುಗಳನ್ನು ವ್ಯಾಪಿಸಿದ ಕೀರ್ತಿ, ಎಲ್ಲ ಕಾರ್ಯಗಳನ್ನು ಪ್ರೇರಿಸುವ ಮೂರ್ತಿ, ಆನಂದತೀರ್ಥರೆನಿಸಿದ ಮಹಾಮುನಿ ವಿಶ್ವಗುರು ಆಚಾರ್ಯ ಮಧ್ವರು.

ಎರಡನೇಯದಾದ ಮಹತ್ ಕಾಣಿಕೆ ಗುರು ವಾದಿರಾಜರು. ಸಂಸ್ಕೃತ, ಕನ್ನಡಗಳಲ್ಲಿ ಈಶದಾಸ ಸಾಹಿತ್ಯವೇದಾಂತವನ್ನು ಧಾರಾಪ್ರವಾಹವಾಗಿ ಹರಿಸಿದವರು.

ಮೂರನೇಯದಾದ ಕಾಣಿಕೆ ಶ್ರೀವಿದ್ಯಾಮಾನ್ಯರು ಹಾಗೂ ವಿಶ್ವೇಶತೀರ್ಥರೆಂಬ ಗುರುಶಿಷ್ಯರು ಜೋಡು ಕಾಣಿಕೆ. ಇದಕ್ಕಾಗಿ ಸಮಾಜ ಕಡಲತೀರದ ಕಡಗೋಲು ಕೃಷ್ಣನಿಗೆ ಎಷ್ಟು ಹರಕೆ ಹೊತ್ತರೂ ಸಾಲದು.

ಮೂರ್ತಿ ಪುಟ್ಟದು, ಜ್ಞಾನ ದೊಡ್ಡದು, ದೇಹ ತೆಳ್ಳಗೆ, ಬಣ್ಣ ಬೆಳ್ಳಗೆ, ಗಂಭೀರ ನಿಲುವು, ಸದಾ ವಿರಕ್ತ ಇರುವು, ಮೂಗು ಉತ್ತಿಷ್ಠತ ಎಂದರೆ ಕಣ್ಣು ಜಾಗ್ರತ ಎನ್ನುವುದು. ಹೃದಯ ತುಂಬಿದ ಪ್ರೀತಿ, ಒಡಲು ಹಿಡಿಯದಷ್ಟು ಔದಾರ್ಯ, ಮೈಮೇಲೆ ಹರಕು ಖಾದಿಯ ಶಾಟಿ, ಹಣೆಯ ಮೇಲೆ ಹರಿವ ಬ್ರಹ್ಮ ತೇಜಸ್ಸು, ತಾಳ್ಮೆ ತುಂಬಿದ ಬದುಕು, ತಪ ತುಂಬಿದ ಜೀವನ, ಎಲ್ಲರನ್ನೂ ಗುರುತಿಸುವ ಗುರು, ಎಲ್ಲರನ್ನೂ ಆಡಿಸುವ ಮಾತು. ಸದಾ ಪಾದರಸದಂತೆ ಓಡಾಟ, ಎಲ್ಲರೊಡನೆ ಒಡನಾಟ, ನಿರಂತರ ಪ್ರವಚನ ಪಾಠ, ಹಿಡಿದ ಕಾರ್ಯ ಪೂರೈಸುವ ಹಟ, ಅಂತೆಯೇ ಮಿಂಚಿನ ಸಂಚಾರದ ಓಟ, ಜ್ಞಾನ ಪ್ರಚಂಡ, ಪ್ರತಿಭೆ ಅದ್ಭುತ, ಮಾತುಗಾರಿಗೆ ಆಶ್ಚರ್ಯಕರ, ಉತ್ಸಾಹ ಅದಮ್ಯ, ಸೌಜನ್ಯ ಆಕರ್ಷಕ, ಕಾರ್ಯ ಅಪರಿಮಿತ, ಜನ ಸಂಪರ್ಕ ಅಪಾರ ಇಂತಹ ಚೈತನ್ಯ ಪೂರ್ಣ ಪೂಜ್ಯಪಾದರು ಯಾರಿರಬಹುದು ?

ಎಂಟು ವರ್ಷದ ಎಳೆ ಹರೆಯದಲ್ಲಿ ಯಂತ್ರೋದ್ಧಾರನ ಸನ್ನಿಧಿಯಲ್ಲಿ ಸನ್ಯಾಸ ಪಡೆದು ವಿಶ್ವೇಶ ತೀರ್ಥರಾಗಿ ಭಾರತದ ಬಾನಿನಂಚಿಗೂ ಕೈಚಾಚುತ್ತಿರುವ ಬಡಕಲು ಸನ್ಯಾಸಿಗಳಿವರು. ಅರವತ್ತರ ಅಂಚಿಗೆ ತಲುಪಿದರೂ ಚೊಕ್ಕ ಚಿನ್ನ, ಅಪ್ಪಟ ಅಪರಂಜಿ, ಉತ್ಸಾಹದ ಕಾರಂಜಿ, ಚೈತನ್ಯದ ಚಿಲುಮೆ. ಇದೇ ಇವರ ಮೇಲ್ಮೆ ದ್ವೈತ ಧರ್ಮದ ಸಾಕಾರ ಮೂರ್ತಿ, ತಪಸ್ಸೇ ಆಕಾರ ಪಡೆದ, ಅಭಿನವ ವಾದಿರಾಜರೆಂಬ ಕೀರ್ತಿ ಪಡೆದ, ಅಭಿನವ ಆನಂದತೀರ್ಥರ ವಿದ್ಯಾಶಿಷ್ಯರಾದ ಶ್ರೀ ವಿದ್ಯಾಮಾನ್ಯರಲ್ಲಿ ಈ ಸನ್ಯಾಸಿಯ ಅಧ್ಯಯನ.

ನಿರಂತರ ಪಾಠಪ್ರವಚನ ಗುರುಸತ್ಯಧ್ಯಾನರ ಗುಣಗಣ ಸೆರೆಹಿಡಿದ ಪ್ರತಿಬಿಂಬ ವಿದ್ಯಾಮಾನ್ಯರಾದರೆ, ವಿದ್ಯಾಮಾನ್ಯರ ಜ್ಞಾನ, ದೀಕ್ಷೆ, ಆಚಾರಗಳನ್ನು ಕರಗತ ಮಾಡಿಕೊಂಡ ಶಿಷ್ಯರೇ ವಿಶ್ವೇಶತೀರ್ಥರು. ಈ ಮೂವರ ಕಾರ್ಯದಿಂದ ಮುಪ್ಪುರಿಗೊಂಡ ಮಾಧ್ವ ಸಮಾಜದ ಕೀರ್ತಿ ಮುಗಿಲು ಮುಟ್ಟಿದ್ದರಲ್ಲಿ ಆಶ್ಚರ್ಯವಿಲ್ಲ. ವಿಶ್ವೇಶತೀರ್ಥರೆಂಬ ಇವರ ಹೆಸರು ಅನ್ವರ್ಥಕ ಅಷ್ಟೇ ಸಾರ್ಥಕ. ಇದು ಸ್ತುತಿಯಲ್ಲ ವಸ್ತುಸ್ಥಿತಿ.

ಉಡುಪಿಯ ಕಡುಬಡವ ಮಠದ, ಪ್ರಸಿದ್ಧಿ ಪರಾಙ್ಮುಖ ಪರಂಪರೆಯಲ್ಲಿ ಇದೊಂದು ಚೈತನ್ಯ ಉದ್ಭವಿಸಿತು. ಹಣದ ಬೆಂಬಲವಿಲ್ಲ, ಹಿಂದಿನ ಗುರುಗಳು ಸಂಪಾದಿಸಿದ ಶಿಷ್ಯ ಸಂಪತ್ತಿಲ್ಲ, ಎಲ್ಲಿಯೂ ಮನೆ ಮಾರುಗಳಿಲ್ಲ. ಜಡತೆ ತುಂಬಿದ ಅಂದಿನ ಅಲ್ಲಿಯ ವಾತಾವರಣ, ಅಧ್ಯಯನ, ಅಧ್ಯಾಪನ ಹಿಂದೆಂದೋ ಬೆಳೆದು ಹೋಗಿ ಹಾಳು ಹೊಲದಂತಿದ್ದ ಆ ಪವಿತ್ರ ಪರಿಸರದಲ್ಲಿ ಈ ಪುಟ್ಟ ಮೂರುತಿ ಕೇವಲ ತನ್ನ ಜ್ಞಾನ, ತನ್ನ ಗುರುವಿನ ಬೆಂಬಲ, ತಾಳ್ಮೆ, ಛಲಗಳಿಂದ, ಕಾರ್ಯ ಕಲಾಪಗಳಿಂದ ಉಡುಪಿಯ ಹೆಸರನ್ನು ಭಾರತದ ನಕಾಶದಲ್ಲಿ ಎದ್ದು ಕಾಣುವಂತೆ ಮಾಡಿತು. ಉಡುಪಿ ಎಲ್ಲ ಕ್ಷೇತ್ರಗಳಲ್ಲಿ ತಲೆ ಎತ್ತಿ ನಿಲ್ಲುವಂತೆ ಮಾಡಿತು. ಮಧ್ವರ ಭೂಮಿಯನ್ನು ಸಮೃದ್ಧ ಭೂಮಿಯನ್ನಾಗಿಸಿತು. ಹತ್ತಾರು ತಲೆಮಾರು ಮತ್ತೆ ಜ್ಞಾನ ಪಾಂಡಿತ್ಯ, ಪಂಡಿತರ, ಪುಸ್ತಕಗಳ ಕೊರತೆ ತಲೆ ಎತ್ತದಂತೆ ಮಾಡಿತು. ಅನೇಕ ಶತಮಾನಗಳವರೆಗೆ ಉಳಿಯುವಂತಹ ಚೈತನ್ಯ ತುಂಬಿತು. ಹುಟ್ಟಿ ಬೆಳೆದ ಪರಂಪರೆಯ ಬಗ್ಗೆ ಅಭಿಮಾನ ಮೂಡಿಸಿತು. ಆಗ ಇವರನ್ನು ಮುಖ ಬಾಗಿ ನೋಡಿದವರು ಇಂದು ಮುಖ ಎತ್ತಿ ನೋಡಬೇಕಾಯಿತು. ವ್ಯಕ್ತಿಯಿಂದ ಸಂಸ್ಥೆಯ ಮೇಲ್ಮೆ ಮಹತಿಗಳು ಹೇಗೆ ಹೆಚ್ಚುವವು ಎನ್ನಲು ಬಹುಶಃ ಇವರಿಗಿಂತ ಉತ್ತಮ ದೃಷ್ಟಾಂತ ಸಿಗಲಾರದು.

ಅಖಿಲ ಭಾರತವನ್ನು ನೂರಾರು ಸಲ ಸುತ್ತಾಡಿ, ದೇಶದ ಮೂಲೆ ಮೂಲೆಯಲ್ಲಿಯ ಮಹಾಮಹಾ ಪಂಡಿತರನ್ನು, ಪೀಠಾಧಿಪತಿಗಳನ್ನು ಕಂಡು ನ್ಯಾಯ, ವೇದಾಂತ, ವ್ಯಾಕರಣ, ಸಾಹಿತ್ಯಾದಿಗಳಲ್ಲಿ ವಾಕ್ಯಾರ್ಥ ಮಾಡಿ ಬೆರಗುಗೊಳಿಸಿದ್ದಾರೆ. ಲೌಕಿಕ ಸಂಪರ್ಕಕ್ಕಿಂತ ಇವರಿಗೆ ಶಾಸ್ತ್ರ ಪಾಂಡಿತ್ಯ ಸಂಪರ್ಕವೂ ಹೆಚ್ಚಿದೆ ಎಂದು ಮನಗಾಣಿಸಿದ್ದಾರೆ. ಆಳವಾದ ಅಪಾರ ಪಾಂಡಿತ್ಯ, ಕಠಿಣ ಕ್ರೋಢ ಪತ್ರಗಳ, ಜಟಿಲ ವಾಕ್ ಸರಣಿಯನ್ನು ಲೀಲಾಜಾಲವಾಗಿ ಬಿಚ್ಚಿ ಬಿಡಿಸುವರು. ಇವರು ಸಹಜವಾಗಿ ಪ್ರಶ್ನಿಸಿದರೂ ಅದು ಪಂಡಿತರಿಗೊಂದು ಕಬ್ಬಿಣದ ಕಡಲೆ. ಪೂರ್ಣಪ್ರಜ್ಞ ವಿದ್ಯಾಪೀಠ ಇವರ ಮಾನಸಕನ್ಯೆ. ಇದೇ ಇವರ ಹೃದಯ. ಇದು ಪಂಡಿತರನ್ನು ನಿರ್ಮಿಸುವ ಕಮ್ಮಟ ಇಲ್ಲಿ ನಿರಂತರ ಶಾಸ್ತ್ರಾಧ್ಯಯನ. ಇದು ಬೇರೆ ಸಮಾಜಗಳಿಗೆ ಆದರ್ಶವಾಗಿದೆ. ಬೇರೆ ವೈದಿಕ ಮತದ ಯಾವ ಪೀಠಾಧಿಪತಿಗಳಲ್ಲಿಯೂ ಇಂತಹ ವಿದ್ಯಾಪೀಠಗಳ ಕಮ್ಮಟ ಇನ್ನೂ ಹುಟ್ಟಿಲ್ಲ. ಹಾಗಾಗಿ ಅಲ್ಲಿ ಪಂಡಿತರ ಪರಂಪರೆ ನಶಿಸುತ್ತದೆ.

ಈ ಮೂರ್ತಿಗೆ ಜ್ಞಾನಕ್ಕೆ ತಕ್ಕ ವಾಕ್ ಪ್ರತಿಭೆ ಇದೆ. ಭಾಷಾ ಸಂಪತ್ತಿದೆ. ಸಾಹಿತ್ಯ ಶಬ್ದ ಸಂಗ್ರಹವಿದೆ. ವಿಚಾರಗಳಲ್ಲಿ ಹೊಸತನವಿದೆ. ಆ ಸಮಾಜ, ಸನ್ನಿವೇಶ, ಸಂದರ್ಭಕ್ಕೆ ತಕ್ಕದಾಗಿ ಇವರ ಮಾತು ಎಲ್ಲ ಹೃದಯ ರಂಜಕವಾಗಿರುತ್ತದೆ. ಇವರು ಪರಂಪರಾವಾದಿಗಳು. ಅದರೆ ರೂಢಿವಾದಿಗಳಲ್ಲ. ಸಂಪ್ರದಾಯ ವಾದಿಗಳು ಆದರೆ ಸಮಕಾಲೀನ ಸಮಾಜ ವ್ಯತಿರಿಕ್ತರಲ್ಲ, ಶಾಸ್ತ್ರವಾದಿಗಳು ಆದರೆ ಆಧುನಿಕ ಪ್ರತಿಕೂಲರಲ್ಲ. ರೂಢಿಯಲ್ಲಿಯ ಜಡತನ ಕಡೆದು, ಕುರುಡುತನವನ್ನು ಹಿಡಿದು ಹೊಡೆದು ಹೊಸ ಅನ್ವೇಷಣದ ಆಯಾಮ ನೀಡುವರು. ಇವರು ಸನಾತನರೂ ಆದರೂ ನಿತ್ಯ ನೂತನರು.

ಸನಾತನ ಧರ್ಮ ಇದೊಂದು ಬದುಕುವ ಪದ್ಧತಿ. ಜೀವಂತ ಜೀವನ ಪ್ರಣಾಲಿ. ವಿಚಾರಪೂರ್ಣ ವಾದ. ಸರ್ವಸಮ್ಮತ ತತ್ತ್ವ. ಬುದ್ಧಿ ಮನಸ್ಸುಗಳಿಗೆ ಒಪ್ಪಿಗೆಯಾಗುವ ಪ್ರಕ್ರಿಯೆ. ಅಂತೆಯೇ ಇದರಲ್ಲಿ ಎಲ್ಲ ಬಣ್ಣ ಬಣ್ಣದ ಜಾತಿ ಧರ್ಮಗಳ ಮೂಲ ಸಮಾವೇಶವಾಗುವದು. ಸಾರ್ವದೇಶಿಕ ಸಾರ್ವಕಾಲಿಕ ಸತ್ಯಗಳು ಇದರಲ್ಲಿ ಆಕಸ್ಮಾತ್ ಆಗುತ್ತ ಬಂದಿವೆ. ಧರ್ಮದಂತೆಯೇ ಬಾಳುವ ಈ ಶ್ರೀಗಳವರೂ ಅವುಗಳನ್ನು

ಅಳವಡಿಸಿಕೊಂಡು ಕ್ರಾಂತಿಯ ಕೇಂದ್ರಬಿಂದು ಆಗಿರುವರು. ಇದೇ ಇವರ ಪರಿಪಕ್ವ ವ್ಯಕ್ತಿತ್ವ. ಇವರು ಒಣ ಜ್ಞಾನ ಹೊರುವ ಜಡಗ್ರಂಥಗಳಾಗಿಲ್ಲ ಆದರೆ ಜ್ಞಾನವನ್ನು ಹೆಚ್ಚೆಚ್ಚು ಬದುಕುವ ವಸ್ತುವನ್ನಾಗಿ ಮಾಡಿ ಕೊಂಡವರು. ಸಕ್ರಿಯವನ್ನಾಗಿಸಿದವರು. ಆರ್ಷ ಜ್ಞಾನ ಪರಂಪರೆಯ ವಾಹಕರು ಈ ಪೇಜಾವರ ಶ್ರೀಗಳು.

ಆಡು ಮುಟ್ಟದ ಗಿಡವಿಲ್ಲದಂತೆ ಇವರು ಅರಿಯದ ಸಮಾಜದ ಹೊಸ ಆಯಾಮಗಳಿಲ್ಲ. ಅಧುನಿಕತೆ ಇಲ್ಲ. ಅಂತೆಯೇ ಅವನ್ನು ತಮ್ಮ ಪ್ರವಚನಗಳಲ್ಲಿ ಕೂಲಂಕಷವಾಗಿ ವಿಮರ್ಶಿಸುವರು. ಸಮಾಜ ಆವಶ್ಯಕತೆಗಳಿಗೆ ಅನುಗುಣವಾಗಿ ತಮ್ಮ ಕಾರ್ಯಕ್ಷೇತ್ರವನ್ನೂ ವಿಸ್ತರಿಸಿಕೊಂಡವರು. ನೂರಾರು ಗ್ರಂಥಗಳ ಸಂಶೋಧನೆ, ಅನುವಾದ, ಪ್ರಕಾಶನ, ಪತ್ರಿಕಾ ಸಂಚಾಲನ, ಅಖಿಲ ಭಾರತ ಮಾಧ್ವ ಸಂಘಟನೆ, ಅಖಿಲ ಭಾರತ ತತ್ತ್ವಜ್ಞಾನ ಸಮ್ಮೇಳನ, ವಿದ್ಯಾರ್ಥಿನಿಲಯ, ಭಕ್ತಿರಥ ಯಾತ್ರಾ, ವಿದ್ಯಾರ್ಥಿಗಳ ಲೌಕಿಕ ಶಿಕ್ಷಣಕ್ಕೆ ಸಹಾಯ ನಿಧಿ, ಸಾಲ, ಶಿಷ್ಯವೇತನ, ಪಂಡಿತ ಸಮ್ಮಾನ, ಷೋಷಣ, ಹಿಂದೂಪರಿಷತ್ ಪೋಷಣ, ಸಂಘಟನ, ವೃದ್ಧಾಶ್ರಮ, ಅನಾಥಾಲಯ, ವೈದ್ಯಕೀಯ ಚಿಕಿತ್ಸಾಲಯ ಹೀಗೆ ಅವರ ಕಾರ್ಯಶಕ್ತಿ ಸಾವಿರ ಮುಖವಾಗಿ ಹರಿಯುತ್ತಿದೆ. ಲಕ್ಷ ಲಕ್ಷ ಜನರ ಬಾಳ ದೀವಿಗೆಯಾಗಿದೆ. ಬದುಕಿಗೆ ಆಧಾರ ಸ್ತಂಭವಾಗಿದೆ.

ಎಮ್ಮ ಮನದಾಳದಲಿ ಇರುವ ಹಿರಿ ಪೀಠದಲಿ
ಮೆರೆಯುತ್ತಿಹ ಮೂರುತಿಗೆ ಇದುವೆ ನಮನ
ಇನ್ನೂ ಬಲು ವ್ಯಾಪಿಸುತ ಶತಮಾನ ಕಾಣುತಲಿ
ಶಿರದಲಿ ಇರುತಿರಲಿ ಮಧ್ವ ಗುರು ಸುಮನ

('ಶ್ರೀ ವಿಶ್ವೇಶ' ಸಂ. – ವರದರಾಜ ಹುಯಿಲಗೋಳ, ಸನ್ಮಾನ ಸಮಿತಿ, ಧಾರವಾಡ, ೧೯೮೦.)

●

ಬಿ. ಎಸ್. ರಾಘವೇಂದ್ರಚಾರ್ಯ

೫-೯

# ವಿಶ್ವಮಾನ್ಯ ಶ್ರೀ ವಿಶ್ವೇಶತೀರ್ಥರು

**ಎಂ**ಟು ವರ್ಷಕ್ಕೇ ಹೆತ್ತವರ ನಂಟನ್ನು ಬಿಟ್ಟು ಸಂನ್ಯಾಸದ ನಂಟನ್ನು ಅಂಟಿಸಿಕೊಂಡ ಈ ವೆಂಕಟರಮಣ ಅಧೋಕ್ಷಜ ವಂಶದಲ್ಲಿ ಗುರುಗಳಿಂದ ಮರುಹುಟ್ಟು ಪಡೆದು, ತನ್ನೆಲ್ಲ ಇಂದ್ರಿಯಗಳ ಈಶನಾಗಿ 'ವಿಶ್ವೇಶ'ನಾದ.

'ವಿಶ್ವೇಶ'ನಾಗಿ ಇವರು ವಿದ್ಯಾರ್ಜನೆಗಾಗಿ ಸೇರಿದ್ದು ಶ್ರೀ ಸತ್ಯಧ್ಯಾನರ ಪ್ರಿಯಶಿಷ್ಯರಾದ ಶ್ರೀ ವಿದ್ಯಾಮಾನ್ಯರನ್ನು, ಇವರಿಂದ ಪಡೆದದ್ದು ಆಧ್ಯಾತ್ಮ ವಿದ್ಯೆಯ ತಿರುಳನ್ನು. ವಿದ್ಯಾರ್ಥಿಗಳಿಗೆ ಉಣ ಬಡಿಸಿದ್ದು ಆಧ್ಯಾತ್ಮವಿದ್ಯೆಯ ಸಾರಸರ್ವಸ್ವವನ್ನು . ಆದ್ದರಿಂದಲೇ ಪೂಜ್ಯರು ಶ್ರೀ ವಿದ್ಯಾಮಾನ್ಯರಿಂದ ವಿಶ್ವಮಾನ್ಯರಾದದ್ದು.

ತನ್ನ ಇಪ್ಪತ್ತನೇಯ ವಯಸ್ಸಿನಲ್ಲಿಯೇ 'ಅಖಿಲ ಭಾರತ ಮಾಧ್ವಮಹಾಮಂಡಲ'ವೆಂಬ ಸಂಸ್ಥೆಯನ್ನು ಸ್ಥಾಪಿಸಿ, ಅಖಿಲ ಮಾಧ್ವಬಂಧುಗಳನ್ನು ಒಗ್ಗೂಡಿಸಿ, ಸಕಲಮಾಧ್ವಬಂಧುಗಳ ಅಧ್ವರ್ಯವಾದರು, ಹಾಗೂ 'ಮಧ್ವಪ್ರಿಯರೂ' ಆದರು.

ಮಾಧ್ವ ಮಂಡಲದ ವತಿಯಿಂದ ಪ್ರತಿವರ್ಷವೂ ವಿದ್ವತ್ಸಭೆಗಳನ್ನು ಏರ್ಪಡಿಸುತ್ತ, ತ್ರಿಮತಸ್ಥ ಪಂಡಿತರನ್ನು ಸಭೆಗೆ ಆಹ್ವಾನಿಸಿ, ತತ್ವಾರ್ಥಗಳನ್ನು ಮಥಿಸಿ, ಸತ್ಯಾಸತ್ಯತೆಯನ್ನು ನೆರೆದ ಜನಸ್ತೋಮಕ್ಕೆ ತಮ್ಮ ತಿಳಿಯಾದ ಕನ್ನಡ ಭಾಷೆಯ ಮೂಲಕ ವಿಸ್ತರಿಸಿ, ಇವರೂ ಒಂದು ರೀತಿಯಲ್ಲಿ 'ತತ್ತ್ವನಿರ್ಣಯ ಪಾರ್ಥ' ರೇ ಆಗಿದ್ದಾರೆ.

ಆಧ್ಯಾತ್ಮ ವಿದ್ಯೆಯು ಅಧೋಗತಿಯನ್ನು ಪಡೆಯುತ್ತಿದ್ದ ಸಮಯದಲ್ಲಿ ಅದರ ಉನ್ನತಿಗಾಗಿ ಇವರು ಸ್ಥಾಪಿಸಿದ್ದು 'ಶ್ರೀಪೂರ್ಣಪ್ರಜ್ಞವಿದ್ಯಾಪೀಠ'ವೆಂಬ ಪ್ರಾಚೀನ ಗುರುಕುಲವನ್ನು. ಸುಮಾರು ಇನ್ನೂರ ಐವತ್ತಕ್ಕೂ ಹೆಚ್ಚಿನ ವಿದ್ಯಾರ್ಥಿಗಳಿಗೆ ಉಚಿತ ಊಟವಸತಿಗಳನ್ನು ಏರ್ಪಡಿಸಿ ವಿದ್ಯಾರ್ಥಿಗಳನ್ನು ಹೆತ್ತ ತಂದೆಗಳಿಗಿಂತಲೂ ಅತಿಯಾದ ಮಮತೆಯಿಂದ ಸಂರಕ್ಷಿಸುತ್ತಿರುವ ಕುಲಪತಿಗಳೆಂದರೆ ಶ್ರೀ ವಿಶ್ವೇಶತೀರ್ಥರು.

ವಿದ್ಯಾಪೀಠದಿಂದ ಹೊರಬಂದಿರುವ ಅನೇಕ ವಿದ್ಯಾರ್ಥಿಗಳು ಪ್ರಾಚೀನ ಹಾಗೂ ಆಧುನಿಕ ವಿದ್ಯೆಯಲ್ಲಿ ವಿದ್ವಾಂಸರಾಗಿ, ಬೇರೆ ಬೇರೆ ಉನ್ನತ ಹುದ್ದೆಗಳಲ್ಲಿ ಕೆಲಸ ಮಾಡುತ್ತಿರುವುದಲ್ಲದೆ, ಆಧ್ಯಾತ್ಮ ವಿದ್ಯೆಯ ಪ್ರಸಾರದಲ್ಲಿಯೂ, ತಮ್ಮನ್ನು ತೊಡಗಿಸಿಕೊಂಡು, ಜ್ಞಾನ ಪ್ರಸಾರದ ಮೂಲಕ ತಮ್ಮ ಸಮಾಜ

ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇದಕ್ಕೆಲ್ಲಾ ಸ್ಫೂರ್ತಿದಾಯಕರೆಂದರೆ ಶ್ರೀ ವಿಶ್ವೇಶತೀರ್ಥರು.

ಆಧುನಿಕತೆಯ ಸುಳಿಯಲ್ಲಿ ಸಿಕ್ಕು, ಧಾರ್ಮಿಕ ಆಚಾರವಿಚಾರಗಳಲ್ಲಿ ನಿರಾಸಕ್ತರಾದ ಯುವ ವಿದ್ಯಾರ್ಥಿಗಳನ್ನು ಕಂಡು ಮತ್ತೆ ಅವರಲ್ಲಿ ಧಾರ್ಮಿಕ ಜಾಗೃತಿಯನ್ನುಂಟು ಮಾಡುವ ಉದ್ದೇಶದಿಂದ ಸ್ಥಾಪಿತವಾದವುಗಳು ಅನೇಕ ವಿದ್ಯಾರ್ಥಿನಿಲಯಗಳು. ನಮ್ಮ ರಾಜ್ಯದಲ್ಲಿ ಮಾತ್ರವಲ್ಲದೆ ಹೊರರಾಜ್ಯಗಳಲ್ಲಿಯೂ ಸೇರಿ ಸುಮಾರು ಇಪ್ಪತ್ತೈದು ವಿದ್ಯಾರ್ಥಿನಿಲಯಗಳು ಸ್ಥಾಪಿತವಾಗಿವೆ. ಈ ವಿದ್ಯಾರ್ಥಿನಿಲಯಗಳಲ್ಲಿ ತಮ್ಮ ಕೈಕೆಳಗೇ ಕಲಿತ ವಿದ್ಯಾಪೀಠದ ವಿದ್ಯಾರ್ಥಿಗಳನ್ನು ಸಂಚಾಲಕರನ್ನಾಗಿ ನಿಯಮಿಸಿ, ವಿದ್ಯಾರ್ಥಿಗಳಿಗೆ ಅತೀ ಕಡಿಮೆ ವೆಚ್ಚದಲ್ಲಿ ಊಟವಸತಿಗಳನ್ನು ಏರ್ಪಡಿಸುವದಲ್ಲದೆ, ಅವರ ದೈನಂದಿನ ಧಾರ್ಮಿಕ ಚಟುವಟಿಕೆಗಳಲ್ಲೂ ಒಲವು ಮೂಡಿಸಿದ್ದಾರೆ ಪೂಜ್ಯ ಶ್ರೀಪಾದಂಗಳವರು.

ಇಲ್ಲಿ ಕಲಿತ ಅನೇಕ ಬಡವಿದ್ಯಾರ್ಥಿಗಳು ಈಗ ಉನ್ನತ ಹುದ್ದೆಗಳಲ್ಲಿ ಕೆಲಸ ಮಾಡುತ್ತ ಶ್ರೀಗಳವರ ಉಪಕಾರವನ್ನು ಪ್ರತಿನಿತ್ಯ ಸ್ಮರಿಸುತ್ತಿದ್ದಾರೆ.

ಸಮಾಜದಲ್ಲಿ ಯಾರೇ ಸಂತ್ರಸ್ತರಿರಲಿ ಜಾತಿಮತಭೇದವಿಲ್ಲದೆ ಅಲ್ಲಿಗೆ ಧಾವಿಸಿ, ತಮ್ಮ ಸಹಾಯಹಸ್ತ ನೀಡುವುದರಲ್ಲಿ ಸಿದ್ಧಹಸ್ತರು ಶ್ರೀ ವಿಶ್ವೇಶತೀರ್ಥರು. ಕ್ಷಾಮದಿಂದ ನೊಂದು ಬೆಂದ ಗೋವುಗಳನ್ನು ತಂದು, ಗೋಶಾಲೆಗಳನ್ನು ನಿರ್ಮಿಸಿ, ಗೋಸಂರಕ್ಷಣೆಯಂಥಹ ಪವಿತ್ರ ಕಾರ್ಯ ವನ್ನೆಸಗಿದ್ದಾರೆ. ಬಿರುಗಾಳಿಯ ಪ್ರಕೋಪಕ್ಕೆ ನಲುಗಿ, ನೆಲಕಚ್ಚಿದ ಸಂತ್ರಸ್ತರನ್ನು ಕಂಡು, ಅಲ್ಲಲ್ಲಿ ಗಂಜಿ ಕೇಂದ್ರಗಳನ್ನು ಸ್ಥಾಪಿಸಿ, ನೊಂದ ಜೀವಗಳನ್ನು ಸಂತೈಸಿದ್ದಾರೆ ಪರಮಪೂಜ್ಯರು.

ಪಂಜಾಬಿನಲ್ಲಿ ಭುಗಿಲೆದ್ದ ದ್ವೇಷಪುಂಜವ ಕಂಡು, ವಿಶ್ವಶಾಂತಿಯ ಮನಗಂಡು, ತಮ್ಮ ಪಾದಯಾತ್ರೆಯ ಮೂಲಕ ಪಂಜಾಬಿನಲ್ಲಿ ಶಾಂತಿನೆಲಸಲು ತಮ್ಮ ಪ್ರಾಣವನ್ನೇ ಪಣವಾಗಿಟ್ಟು ನಮ್ಮ ರಾಜ್ಯದಿಂದ ಹೊರಟ ಏಕೈಕ ಧೀಮಂತ ಪೀಠಾಧಿಪತಿಗಳೆಂದರೆ ಶ್ರೀ ವಿಶ್ವೇಶತೀರ್ಥರು.

'ಜನಸೇವೆಯೇ ಜನಾರ್ದನನ ಸೇವೆ' ಎಂಬ ಭಾವನೆಯನ್ನೆ ರಕ್ತಗತವನ್ನಾಗಿ ಮಾಡಿಕೊಂಡ ಪೂಜ್ಯರು, ಬಡರೋಗಿಗಳ ಸಹಾಯಾರ್ಥವಾಗಿ 'ಶ್ರೀಕಷ್ಣಸೇವಾಶ್ರಮ' ಎಂಬ ಉಚಿತ ಆಸ್ಪತ್ರೆಗಳನ್ನು ಸ್ಥಾಪಿಸಿ, ತನ್ಮೂಲಕ ಜನಾರ್ದನನ ಸೇವೆಗೈಯುತ್ತಿದ್ದಾರೆ.

ಮುಳುಗುತ್ತಿದ್ದ ಹಡಗನ್ನು ದಡ ಮುಟ್ಟಿಸಿದ ಶ್ರೀ ಮಧ್ವರಂತೆ, ಆರ್ಥಿಕ ಸಂಕಷ್ಟದಿಂದ ಮುಳುಗುತ್ತಿದ್ದ ಧಾರವಾಡದ 'ಜೆ.ಎಸ್.ಎಸ್.' ಎಂಬ ಶಿಕ್ಷಣ ಸಂಸ್ಥೆಯನ್ನು ದಡಮುಟ್ಟಿಸಿದವರು ಶ್ರೀವಿಶ್ವೇಶತೀರ್ಥರು. ಅಷ್ಟಲ್ಲದೆ ಈ ಜೆ.ಎಸ್. ಎಸ್. ಹಡಗು ಮತ್ತೆಂದೂ ಮುಳಗಬಾರದೆಂದು ತಿಳಿದು ಇದರ ಮಂಚೂಣಿ ಯಲ್ಲಿ ತಂದು ನಿಲ್ಲಿಸಿದ್ದು ಪೂಜ್ಯ ಶ್ರೀ ವೀರೇಂದ್ರ ಹೆಗ್ಗಡೆಯವರನ್ನು. ಇದರಿಂದ ಶ್ರೀಗಳು ಧಾರವಾಡದ ಸಮಸ್ತ ನಾಗರಿಕರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ.

ವಿಶ್ವಹಿಂದು ಪರಿಷತ್ತಿನ ನೇತೃತ್ವವಹಿಸಿದ ಶ್ರೀಗಳು ಸಮಸ್ತ ಹಿಂದೂಗಳ ಏಳ್ಗೆಗಾಗಿ ಶ್ರಮಿಸುತ್ತಿದ್ದಾರೆ. ಅಸ್ಸಾಮಿನ ಅಂಚಿನಲ್ಲಿ ಕೆಲವು ಕ್ರೈಸ್ತಪಾದ್ರಿಗಳ ಆಮಿಷಕ್ಕೊಳಗಾಗಿ ಮತಾಂತರ ವಾಗುತ್ತಿದ್ದ ಹಿಂದೂಗಳನ್ನು ಕಂಡು ಮತ್ತೆ ಅವರಿಗೆ ಹಿಂದೂ ಧರ್ಮದ ಶ್ರೇಷ್ಠತೆಯನ್ನು ಸಾರಿ ಮತಾಂತರವಾಗದಂತೆ ಮನವೊಲಿಸಿದ್ದಾರೆ.

'ಪರ್ಯಾಯವೆಂದರೆ ಶ್ರೀ ಪೇಜಾವರ ಶ್ರೀಗಳ ಪರ್ಯಾಯ' ಎಂಬ ಜನರ ಮಾತಿನಂತೆ ತಮ್ಮ ಹಿಂದಿನ ಪರ್ಯಾಯಗಳಲ್ಲಿ ಅಭೂತಪೂರ್ವ ಕಾರ್ಯಗಳನ್ನೆಸಗಿ, ಶ್ರೀಕೃಷ್ಣಮಠದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದ್ದಾರೆ.

ಶ್ರೀಗಳವರ ತಲೆಯೆಂದರೆ ಹೊಸ ಹೊಸ ಯೋಜನೆಗಳ ಯಂತ್ರಾಗಾರ. ಜನತೆಗೆ ಏನನ್ನಾದರೂ ಮಾಡುತ್ತಿರಲೇ ಬೇಕೆಂಬ ತಂತ್ರಾಗಾರ. ಹೀಗಾಗಿ ಶ್ರೀಗಳವರು ಯಾವಾಗಲೂ ಚಟುವಟಿಕೆಯ

ಕೇಂದ್ರಾಗಾರ. ಇವರ ಯಾವ ಯೋಜನೆಗಳೂ ನಿಷ್ಫಲವಾಗಿಲ್ಲ. ಎಲ್ಲಕ್ಕೂ ಜನತೆಯ ಅಪಾರ ಬೆಂಬಲ.

ಹೀಗೆ ಹೇಳುತ್ತ ಹೋದರೆ ಶ್ರೀಗಳ ವ್ಯಕ್ತಿತ್ವ ನಿರೂಪಿಸುವ ಒಂದು ದೊಡ್ಡ ಹೊತ್ತಿಗೆಯೇ ಸಿದ್ಧವಾದೀತು !

ದಕ್ಷಿಣ ಕನ್ನಡದ ಕುಗ್ರಾಮದಲ್ಲಿ ಹುಟ್ಟಿ, ತ್ರಿವಿಕ್ರಮನಂತೆ ಇಡೀ ದೇಶವನ್ನೇ ವ್ಯಾಪಿಸಿ ವಿಶ್ವಮಾನ್ಯತೆಯನ್ನು ಗಳಿಸಿಕೊಂಡ ಈ ಸನ್ಯಾಸಿಗಳಿಗೆ ನಾವೇನು ಕೊಟ್ಟೇವು?

ಕೊಡುವುದಾದರೆ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳನ್ನು ಮಾತ್ರ.

(ಈ ಗ್ರಂಥಕ್ಕಾಗಿ ಬರೆದ ಲೇಖನ – ೧೯೯೯. – ಸಂ.)

●

# ಕೆ. ಎಸ್. ದೇಶಪಾಂಡೆ

೫-೧೦

## ಧೀಮಂತ ವ್ಯಕ್ತಿತ್ವದ ಶ್ರೀಗಳು

ಎಲ್ಲ ಹಿರಿಯ ಗುಣಗಳ ಆಗರವಾಗಿ, ಐಹಿಕ ಸುಖ ಸಂಪತ್ತುಗಳಿಗೆ ವಿಮುಖರಾಗಿ, ವೀತರಾಗ ಭಯಕ್ರೋಧರಾಗಿ, ಹಸುಗೂಸಿನಂತೆ ನಗುಮುಖ ಹೊಂದಿ, ಅದರಂತೆ ಮುಗ್ಧ ಸ್ನಿಗ್ಧ ಸ್ವಭಾವ ಹೊಂದಿ, ಪೂತಾತ್ಮರಾಗಿ, ಪುನೀತರಾಗಿ, ತೆರೆದಿಟ್ಟ ಗ್ರಂಥದಂತೆ ತಮ್ಮ ಜೀವನವನ್ನು ಭಗವಂತನ ಸೇವೆಯಲ್ಲಿ ಆದರ್ಶಮಯವಾಗಿ ನಡೆಸಿಕೊಂಡು ಹೋದ ಹೋಗುತ್ತಿರವ ದೊಡ್ಡವರನ್ನು ಕುರಿತು ಮಾತನಾಡುವುದೆಂದರೆ, ಬರೆಯುವುದೆಂದರೆ ತೀರ್ಥಯಾತ್ರೆಗೈದಂತೆ. ಅಷ್ಟೊಂದು ಪುಣ್ಯಕರವಾದ, ಪಾವನಕರವಾದ ಕೆಲಸ ಮತ್ತೊಂದಿಲ್ಲ ! ಅವರಲ್ಲೂ ಪೂಜ್ಯ ಪೇಜಾವರ ಶ್ರೀಗಳನ್ನು ಕುರಿತು ಬರೆಯುವುದೆಂದರೆ ಬದರೀ ಕೇದಾರನಾಥ ಯಾತ್ರೆ ಕೈಕೊಂಡಂತೆಯೇ ಸರಿ.

ಶ್ರೀಗಳವರನ್ನು ನಾನು ಕಂಡದ್ದು ಅವರನ್ನು ಮಾತನಾಡಿಸಿದ್ದು ಎರಡೇ ಎರಡು ಸಲ.

ಮೊದಲನೆಯ ಸಲ ಅವರನ್ನು ನಾನು ರಾಣೆಬೆನ್ನೂರಿನಿಂದ ಚೌಡದಾನಪುರಕ್ಕೆ ಕರೆದುಕೊಂಡು ಹೋಗಬೇಕಾಗಿತ್ತು. ಹನ್ನೆರಡು ವರ್ಷಕ್ಕೆ ಹಿಂದೆ ಘಟಿಸಿದ ಸಂಗತಿ ಇದು. ಆದರೆ ನನ್ನ ಮನಃಪಟಲದಲ್ಲಿ ಶ್ರೀಗಳವರ ಅಂದಿನ ಸನ್ನಿಧಾನ ಇನ್ನೂ ಹೆಚ್ಚು ಹಸಿರಾಗಿಯೇ ಉಳಿದಿದೆ.

ನನ್ನ ಸನ್ಮಿತ್ರರೂ ಕರ್ನಾಟಕ ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳೂ ಆದ ಶ್ರೀ ಸದಾಶಿವ ಒಡೆಯರ ಅವರ ಚಿನ್ನದ ಹಬ್ಬ ಅವರ ಊರಾದ ಚೌಡದಾನಪುರದಲ್ಲಿ ಆಗ ನಡೆಯಲಿತ್ತು. ಆ ಶುಭಸಮಾರಂಭದಲ್ಲಿ ಪೂಜ್ಯ ಪೇಜಾವರ ಶ್ರೀಗಳವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಗಳವರು ರಾಣೆಬೆನ್ನೂರಿನ ನಾಯಿಕ ಅವರಲ್ಲಿ ತಂಗಿದ್ದರಿಂದ ಅವರನ್ನು ನಾನು ರಾಣೆಬೆನ್ನೂರಿನಿಂದ ಚೌಡದಾನಪುರಕ್ಕೆ ಕರೆದುಕೊಂಡು ಹೋಗಲು, ನಾಯಿಕರ ಮನೆಗೆ ಸರಿಯಾದ ವೇಳೆಗೆ ಹೋದೆ.

ಸಾಮಾನ್ಯವಾಗಿ ಮಠಾಧೀಶರು ತಾವು ಪಾಲ್ಗೊಳ್ಳುವ ಸಭೆ ಸಮಾರಂಭಗಳಲ್ಲಿ ಅದರಲ್ಲೂ ಇನ್ನಿತರ ಮಠಾಧೀಶರೂ ಸಮಾವೇಶಗೊಳ್ಳದ ಸನ್ನಿವೇಶಗಳಲ್ಲಿ-ತಮಗೆ ವೈಯುಕ್ತಿಕವಾಗಿ ಸಕಲ ಮಾನಮರ್ಯಾದೆಗಳು ದೊರೆಯುವಂತೆ ವ್ಯವಸ್ಥೆ ಇರಬೇಕೆಂದು ಸೂಚಿಸುತ್ತಾರಂತೆ. ಇವೇನೂ ಅರಿಯದ ನಾನು ಪೇಜಾವರ ಶ್ರೀಗಳ ಸನ್ನಿಧಾನಕ್ಕೆ ಅಂದು ಅಧೀರನಾಗಿಯೇ ಹೋಗಿದ್ದೆ. ಆದರೆ ಅಲ್ಲಿ ನನಗೆ ಕಾದಿದ್ದು ಹಿತವಾದ ಪ್ರಸಂಗ. 'ಸಮಯವಾಗಿದೆ ಶ್ರೀಗಳ ಅಪ್ಪಣೆಯಾದರೆ ಹೊರಡೋಣ' ಎಂದು ನಾನು ಸೂಚಿಸಿದಾಕ್ಷಣ

ಹೊರಟೇ ಬಿಟ್ಟರು. ದಾರಿಯುದ್ದಕ್ಕೂ ವಿದ್ವತ್ತಿನ ಸಂಭಾಷಣೆ. ಸಭೆಯಲ್ಲಿನ ವ್ಯವಸ್ಥೆ ಮುಂತಾದ ಸಣ್ಣ ವಿಷಯಗಳ ಬಗ್ಗೆ ಪ್ರಸ್ತಾಪವೇ ಇಲ್ಲ.

ಸರಿ ಸಭೆ ಚೆನ್ನಾಗಿಯೇ ನಡೆಯಿತು. ಶ್ರೀಗಳವರ ಅಮೋಘವಾಣಿ ನಾನು ಅದೇ ಮೊದಲ ಬಾರಿಗೆ ಕೇಳಿದ್ದು, ಸುಂದರವಾದ ಸುಲಲಿತವಾದ ಶುಚಿಯಾದ ಕನ್ನಡದಲ್ಲಿ ಅವರು ಅಣ್ಣ ಬಸವಣ್ಣನವರು ಹೇಳಿದೋಪಾದಿಯಲ್ಲಿ ''ನುಡಿದರೆ ಮುತ್ತಿನ ಹಾರದಂತಿರಬೇಕು'' ಎಂಬಂತೆ ಭಾಷಣ ಅರ್ಥಪೂರ್ಣ, ಭಾವಪೂರ್ಣ ಸಮಯೋಚಿತವಾಗಿತ್ತು.

ಎರಡನೇ ಸಲ ನಾನು ಅವರನ್ನು ಕಂಡದ್ದು ಅವರು ಎರಡು ಮೂರು ವರುಷಗಳ ಹಿಂದೆ ಪಂಜಾಬಕ್ಕೆ ಅಲ್ಲಿದ್ದ ದಳ್ಳುರಿಯನ್ನು ಶಮನ ಮಾಡುವ ಉದ್ದೇಶದಿಂದ ಕೈಕೊಂಡ ಚೈತ್ರ ಯಾತ್ರೆಯ ಸಂದರ್ಭದಂದು. ಅವರ ಪಂಜಾಬ ಪ್ರವಾಸದ ಸುದ್ದಿಯನ್ನು ವೃತ್ತಪತ್ರಿಕೆಯಲ್ಲಿ ಓದಿ, ನಾನೂ ನನ್ನ ಆಪ್ತಮಿತ್ರರಾದ ಪ್ರೊ. ಬಿ. ಬಿ. ಹುನಗುಂದ ಅವರು ಸೇರಿ ಶ್ರೀಗಳವರು ಹೋಗುವ ದಿನ ಧಾರವಾಡ ರೈಲು ನಿಲ್ದಾಣಕ್ಕೆ ಹೋಗಿ ಅವರಿಗೆ ಹೂಮಾಲೆ ಅರ್ಪಿಸಿ, ಭಗವಂತ ಅವರ ಬೆನ್ನಿಗೆ ಭೀಮರಕ್ಷೆ ಒದಗಿಸಲೆಂದು ಪ್ರಾರ್ಥಿಸಿಕೊಳ್ಳಲು ನಿರ್ಧರಿಸಿದೆವು.

ಯೋಜಿತ ಸಮಯಕ್ಕೆ ನಾವು ರೈಲ್ವೆ ನಿಲ್ದಾಣಕ್ಕೆ ಹೋದಾಗ ಅಲ್ಲಿ ಜನಸ್ತೋಮವೇ ಕಾದಿತ್ತು. ಎಲ್ಲರೂ ಮಾಲಾರ್ಪಣೆ ಮಾಡುವವರೇ. ಶ್ರೀಗಳವರ ಆಶೀರ್ವಾದ ಬಯಸಿ ಬಂದವರೇ. ಇಂಥ ಗದ್ದಲದಲ್ಲಿ ರೈಲು ನಿಲ್ಲುವ ಐದಾರು ನಿಮಿಷಗಳಲ್ಲಿ ಅವರಿಗೆ ಮಾಲಾರ್ಪಣೆ ಮಾಡುವ ಸುಯೋಗ ನಮ್ಮದಾದೀತೇ ಎಂಬ ಆತಂಕ ನಮ್ಮ ಮನದಲ್ಲಿ ಮೂಡದೇ ಇರಲಿಲ್ಲ.

ಸರಿಯಾದ ಸಮಯಕ್ಕೆ ರೈಲು ಬಂದಿತು. ಇಲ್ಲಿಯವರೆಗೆ ಗುಜುಗುಜು ಮಾತನಾಡುತ್ತಾ ನಿಂತಿದ್ದ ಭಕ್ತವೃಂದ ಶ್ರೀಗಳಿದ್ದ ಡಬ್ಬಿಯ ಮೇಲೆ ಮುಗಿಬಿದ್ದರು. ಗದ್ದಲವೋ ಗದ್ದಲ ! ನಾನು, ಹುನಗುಂದ ಅಲ್ಲಿಯೇ ಇದ್ದ ಬೇವಿನ ಮರದ ಕೆಳಗೆ ನಿಂತಿದ್ದೆವು. ಇನ್ನೇನು ರೈಲು ಹೊರಡುವುದರಲ್ಲಿತ್ತು. ಅಷ್ಟರಲ್ಲಿ ಶ್ರೀಗಳವರ ಕೃಪಾಕಟಾಕ್ಷ ನಮ್ಮ ಮೇಲೆ ಬಿತ್ತು, ಅವರು ಕೈಸನ್ನೆ ಮಾಡಿ ಕೈ ಬೀಸಿ ಕರೆದರು. ಜನಸಂದಣಿ ಪಥಕ್ಕೆ ಸರಿದುಕೊಂಡು ನಮ್ಮ ಮನೋರಥ ಈಡೇರಿಸಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟರು. ಅಷ್ಟರಲ್ಲಿ ರೈಲು ಹೊರಟೇ ಬಿಟ್ಟಿತು; ಮಾತಿಗೆ ಅವಕಾಶವೇ ಇರಲಿಲ್ಲ. ಮೌನವೇ ಬಂಗಾರವಾಯಿತು. ಆದರೆ ಶ್ರೀಗಳವರ ಹಸನ್ಮುಖ ನಮಗಲ್ಲಿ ಅಭಯ ಸಂದೇಶವನ್ನೇ ನೀಡುವಂತಿತ್ತು .

ನಮಗೆ ಹೆಮ್ಮೆಯ ಸಂತಸದ ಮಾತೆಂದರೆ-ಕರ್ನಾಟಕದಿಂದ ಅದೇಕೆ ದಕ್ಷಿಣ ಭಾರತದಿಂದ ಮಠಾಧೀಶರೊಬ್ಬರು, ಪಂಜಾಬ ನಮ್ಮ ದೇಶದ ಅವಿಭಾಜ್ಯ ಭಾಗ. ಅಲ್ಲಿನ ಶೀಖ ಜನರು ನಮ್ಮ ಸಹೋದರರು, ಅವರ ಕ್ಷೋಭೆ ತಗ್ಗಬೇಕು. ಭರತಖಂಡ ಎರಡನೇ ಭಾರಿ ವಿಭಜನೆಗೆ ಒಳಗಾಗಬಾರದು' ಎಂಬ ತವಕದಿಂದ ಅಲ್ಲಿಗೆ ಹೊರಟಿದ್ದಾರಲ್ಲ ಎಂಬುದು; ದೇಶದ ಕ್ಷೇಮವನ್ನು ಕುರಿತು, ಅದರ ಸಮಗ್ರತೆ, ಐಕ್ಯತೆ ಕುರಿತು ಸಕ್ರಿಯವಾಗಿ ಚಿಂತನ ಮಾಡುವದರ ಜೊತೆಗೆ ಪರಮ ತ್ಯಾಗಕ್ಕೆ ಕಟಿಬದ್ಧರಾದ ಸ್ವಾಮೀಜಿಯೊಬ್ಬರಿದ್ದಾರಲ್ಲ ಎಂಬುದು.

ಈ ಎರಡೇ ಎರಡು ಘಟನೆಗಳಿಂದ ಅವರೊಬ್ಬ ಮೇರು ಸದೃಶರಾದ ಮಹಾಮಹಿಮರೆಂದು ನಾನವರನ್ನು ಪೂಜ್ಯ ಭಾವನೆಯಿಂದ ಕಾಣುತ್ತಿದ್ದೇನೆ.

ಇನ್ನು ಅವರು ಕೈಕೊಂಡ ಸಹಸ್ರಾರು ಪುಣ್ಯಪ್ರದ, ಲೋಕ ಕಲ್ಯಾಣ ಕಾರ್ಯಕ್ರಮಗಳಲ್ಲಿ ಒಂದೆರಡು ಕುರಿತು ಇಲ್ಲಿ ಪ್ರಸ್ತಾಪಿಸುತ್ತೇನೆ.

ಮೊದಲನೆಯದು, ನಮಗೆಲ್ಲ ಹಿರಿಯರೂ, ಆದರ್ಶ ಪ್ರಿಯರೂ, ಪೂಜ್ಯರೂ ಆದ ದಿ. ರಾ. ಶ್ರೀ. ಹುಕ್ಕೇರಿಕರರು, ತಮ್ಮ ಜೀವನದ ತಪಸ್ಸನ್ನೆಲ್ಲ ಧಾರೆಯೆರೆದು ಸ್ವತಃ ತಮಗೇ ಒಂದು ಹಂಚಿನ

ಮನೆಯಿಲ್ಲದ, ನೆತ್ತಿ ಹೊಟ್ಟೆ ಬಟ್ಟೆಗೆ ಸರಿಯಾದ ವ್ಯವಸ್ಥೆಯಿಲ್ಲದ ಪರಿಸ್ಥಿತಿಯಲ್ಲಿ, ವಿದ್ಯಾಗಿರಿಯೆಂಬ ಆಧುನಿಕ ತಪೋವನ ನಿರ್ಮಿಸಿ, ನೂರಾರು ವಿದ್ವಾಂಸರಿಗೆ ಕೆಲಸದ ಅವಕಾಶ, ಸಾವಿರಾರು ಪ್ರೌಢ ವಿದ್ಯಾರ್ಥಿಗಳಿಗೆ ತಮ್ಮ ಶಿಕ್ಷಣ ಮುಂದುವರಿಸುವ ಅವಕಾಶ ಇವುಗಳನ್ನು ಧಾರವಾಡದ ವಿದ್ಯಾಗಿರಿಯಲ್ಲಿ ಕಲ್ಪಿಸಿ ನಿರ್ಮಿಸಿಕೊಟ್ಟರು. ಅದಕ್ಷರಾದ, ಅನಾಮಧೇಯ ಸ್ವಾರ್ಥಿಗಳಾದ ಮುಂಧೋರಣೆಯಿಲ್ಲದ ನಾವು ಅದನ್ನು ''ಮುಚ್ಚುವ'' ವ್ಯವಸ್ಥೆಗೆ ತಂದೆವು, ಪೂಜ್ಯ ಪೇಜಾವರ ಶ್ರೀಗಳವರು, ಸಕಾಲದಲ್ಲಿ ಮಿಂಚಿನಂತೆ ಕಾರ್ಯ ಮಾಡದೇ ಹೋಗಿದ್ದರೆ ಜೆ.ಎಸ್.ಎಸ್ ಕಾಲೇಜು ಕಾಂಪ್ಲೆಕ್ಸ್ ಇಂದಿಗೆ ಮುಚ್ಚಿ ಹೋಗಿ ಹಳೆ ಮಾತಾಗುತ್ತಿತ್ತು .

ಪೇಜಾವರ ಶ್ರೀಗಳ ಪುಣ್ಯದಿಂದಾಗಿ ಆ ಸಂಸ್ಥೆ, ಸರಸ್ವತಿ ಹಾಗೂ ಲಕ್ಷ್ಮೀ ಪುತ್ರರೂ ಮಹಾ ಸಂಘಟಿಕರೂ ದೂರದೃಷ್ಟಿಯುಳ್ಳವರೂ, ಧೀರೋದಾತ್ತರೂ ಆದ ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರ ಹೆಗ್ಗಡೆ ಅವರ ನೇತೃತ್ವದಲ್ಲಿ ಮಾದರಿ ಸಂಸ್ಥೆಯಾಗಿ ಕಂಗೊಳಿಸುತ್ತಿದೆ.

ಶ್ರೀಗಳವರು ವಿದ್ಯಾಕ್ಷೇತ್ರದಲ್ಲಿ ಕೈಕೊಂಡ ಇನ್ನೊಂದು ಪುಣ್ಯಪ್ರದ ಕಾರ್ಯಕ್ರಮದ ಬಗ್ಗೆ ಪ್ರಸ್ತಾಪ ಅತ್ಯವಶ್ಯ. ಅದೆಂದರೆ, ಬಡವಿದ್ಯಾರ್ಥಿಗಳು ತಮ್ಮ ಶಿಕ್ಷಣ ಮುಂದುವರಿಸಲು ಅನುಕೂಲವಾಗುವಂತೆ ನಾಡಿನಾದ್ಯಂತ ಅಲ್ಲಲ್ಲಿ ಪುಕ್ಕಟೆ ವಿದ್ಯಾರ್ಥಿನಿಲಯಗಳನ್ನು ತೆರೆದು ನಡೆಸುತ್ತಿರುವುದು. ನಮ್ಮಲ್ಲಿ ಬಡತನ ಬೇಕಾದಷ್ಟಿದೆ. ೩೫ ವರ್ಷ ದೀರ್ಘಕಾಲ ನಾನು ಕರ್ನಾಟಕದಲ್ಲಿ ಹಲವು ವಿಶ್ವವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸುವ ಸುಯೋಗ ಹೊಂದಿದ್ದೆ. ಈ ಅವಧಿಯಲ್ಲಿ ಪ್ರತಿವರ್ಷ ಒಬ್ಬರು ಅಥವಾ ಇಬ್ಬರು ವಿದ್ಯಾರ್ಥಿಗಳು ನನ್ನೆಡೆಗೆ ಸಹಾಯಕ್ಕಾಗಿ ಬರುತ್ತಿದ್ದರು. ಫೀ ಕೊಡಲು ಹಣ ಇಲ್ಲ , ಇಂಟರವ್ಯೂ ಸಲುವಾಗಿ ಮುಂಬೈ ಮದ್ರಾಸುಗಳಿಗೆ ಹೋಗಲು ರೈಲು ಖರ್ಚಿಗೆ ತೊಂದರೆ, ವಸತಿ ಸೌಕರ್ಯದ ಅಭಾವ ಹೀಗೆ ಎಷ್ಟೋ ಅಡಚಣೆಗಳು. ಒಂದೆರಡು ಸಂದರ್ಭಗಳಲ್ಲಂತೂ, ಉಡಲು ಬಟ್ಟೆಯಿಲ್ಲದ, ಕ್ಲಾಸಿನಲ್ಲಿ ನೋಟ್ಸ್ ತೆಗೆದುಕೊಳ್ಳಲು ನೋಟ್ ಬುಕ್ಸ್ ಕೊಳ್ಳಲು ದುಡ್ಡಿಲ್ಲದ, ಒಪ್ಪೊತ್ತು ಊಟ ಮಾಡಿ ಜೀವನ ನಿರ್ವಹಿಸುತ್ತಿದ್ದ ವಿದ್ಯಾರ್ಥಿಗಳ ನಿದರ್ಶನ ನನ್ನ ಗಮನಕ್ಕೆ ಬಂದಿತು.

ನಮ್ಮಲ್ಲಿ ಬಡತನ ಬೇಕಾದಷ್ಟಿದೆಯೆಂದು ಆಗಲೇ ಹೇಳಿದೆನಷ್ಟೇ, ವಿದ್ಯೆಯೊಂದರಿಂದಲೇ ನಮ್ಮ ಯುವಕ ಯುವತಿಯರಿಗೆ ತಮ್ಮ ಭವಿಷ್ಯತ್ತನ್ನು ಭದ್ರವಾಗಿ ನಿರ್ಮಿಸಿಕೊಳ್ಳಲು ಸಾಧ್ಯವಿದೆ. ಬಡತನದಲ್ಲಿ ಕಾಲೇಜು, ವಿಶ್ವವಿದ್ಯಾಲಯದ ಮಟ್ಟದಲ್ಲಿ ಶಿಕ್ಷಣ ಮುಂದುವರಿಸಲಾಗದೆ, ಶಿಕ್ಷಣಕ್ಕೆ ಶರಣೆಂದು ಟೆಲಿಫೋನ್ ಅಪರೇಟರ್ ಆಗಿಯೋ ಅಂಚೆ ಕಚೇರಿಯಲ್ಲಿ ಕಾರಕೂನರಾಗಿಯೋ, ಗುದಾಮು, ಅಂಗಡಿ ಮುಂತಾದ ಖಾಸಗಿ ಸಂಸ್ಥೆಗಳಲ್ಲಿ ನೌಕರರಾಗಿಯೋ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳು ಕೊರಗುತ್ತಿದ್ದಾರೆ, ಕೊಳೆಯುತ್ತಿದ್ದಾರೆ. ಇವರೆಲ್ಲ ಡಾಕ್ಟರಾಗಿಯೋ ಇಂಜಿನಿಯರಾಗಿಯೋ ಪ್ರೊಫೆಸರ್‌ಗಳಾಗಿಯೋ ಅರಳಿ, ತಮ್ಮ ತಮ್ಮ ಕುಟುಂಬಕ್ಕೆ ತಮ್ಮ ಸಮಾಜಕ್ಕೆ ತನ್ಮೂಲಕ ತಮ್ಮ ನಾಡಿಗೆ, ರಾಷ್ಟ್ರಕ್ಕೆ ಆಧಾರ ಸ್ತಂಭಗಳಾಗಿ ಕಂಗೊಳಿಸಬೇಕಾದವರು. ಪೇಜಾವರ ಸ್ವಾಮಿಗಳ ಔದಾರ್ಯದಿಂದಾಗಿ ಇವರ ಸಂಖ್ಯೆ ತೀರ ತಗ್ಗಿದೆ. ಇಲ್ಲದಿದ್ದರೆ ಇದು ಇಮ್ಮಡಿ, ಮುಮ್ಮಡಿ, ನೂರ್ಮಡಿಗೊಂಡು ನಮ್ಮ ಸಮಾಜವನ್ನು ಇನ್ನಿಷ್ಟು ಕನಿಷ್ಠ ವರ್ಗಕ್ಕೆ ಇಳಿಸುತ್ತಿತ್ತು.

ಪೇಜಾವರ ಶ್ರೀಗಳವರ ಈ ಒಂದು ದೊಡ್ಡ ಉಪಕ್ರಮವನ್ನು ಇನ್ನುಳಿದ ಸ್ವಾಮಿಗಳು - ವೀರಶೈವ ಸಮಾಜದ ಸ್ವಾಮಿಗಳನ್ನು ಬಿಟ್ಟು, ಯಾಕೆಂದರೆ ಅವರೆಲ್ಲ ಈ ವಿಷಯದಲ್ಲಿ ೬-೭ ದಶಕಗಳ ಹಿಂದೆಯೇ ಜಾಗೃತರಾಗಿ ಅಮೋಘ ಕಾರ್ಯಗೈದಿದ್ದಾರೆ- ಅನುಸರಿಸಬೇಕಾದುದು ಈ ಹೊತ್ತಿಗೆ ಆದ್ಯತೆಯ ಕ್ರಮವಾಗಿದೆ. ''ತಾ ಬಲ ಜಗ ಬಲ'' ಎಂಬ ಗಾದೆಯಂತೆ ಭಕ್ತರು ಬಲ್ಲಿದರಾದರೆ, ಮಠಗಳಿಗೂ ಹಿತ, ದೇಶಕ್ಕೂ ಹಿತ. ಭಕ್ತರ ಐಹಿಕ ಏಳ್ಗೆಯ ಬಗ್ಗೆ ಮಠಾಧೀಶರು ಗಮನಹರಿಸಲೇ ಬೇಕಾಗಿದೆ. ಈ ಸಮೂಹ

ದಲ್ಲಿ ಅನಾಥ ಅಂಗವಿಕಲರಿದ್ದಾರೆ, ಅನಾಥ ವಿಧವೆಯರಿದ್ದಾರೆ. ಅವರೆಲ್ಲರನ್ನೂ ಸಮಾಜದ ಸಮರ್ಥ ಘಟಕಗಳನ್ನಾಗಿ ಪರಿವರ್ತಿಸುವ ಕಾರ್ಯಕ್ರಮ ಹಮ್ಮಿಕೊಳ್ಳುವ ಸಮಯ ಇದೀಗ ಬಂದಿದೆ. ಪಾರ್ಸಿ ಸಮಾಜದವರು ತಮ್ಮ ಸಮಾಜದ ಉಳಿತಾಯಕ್ಕಾಗಿ ಹಾಕಿಕೊಂಡ ಮಾದರಿಯ ಮೇಲೆ ಪ್ರಗತಿಪರ ವಿಚಾರಗಳುಳ್ಳ ಪೇಜಾವರ ಶ್ರೀಗಳು ಭವಿಷ್ಯತ್ಕಾಲದಲ್ಲಿ ಇಂಥ ವಿದ್ಯಾರ್ಥಿನಿಲಯಗಳ ಸಂಖ್ಯೆಯನ್ನು ಇಮ್ಮಡಿ ಮುಮ್ಮಡಿಗೊಳಿಸುವದರ ಜೊತೆಗೆ ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ತೆರೆಯುವ ಸಾಹಸಕ್ಕೆಳಸುವರೆಂದು ಧೈರ್ಯವಾಗಿ ಹೇಳಬಹುದಾಗಿದೆ.

ಪೇಜಾವರ ಶ್ರೀಗಳು ಇನ್ನೂ ಹಲವು ಕ್ಷೇತ್ರಗಳಲ್ಲಿ ಪ್ರಗತಿಪರ ವಿಚಾರ ಹೊಂದಿದ್ದು ನಮ್ಮಂಥ ಭಕ್ತವೃಂದಕ್ಕೆ ಹಿಡಿಸಲಾರದಷ್ಟು ಸಂತೋಷ ತಂದೊಡ್ಡಿದೆ. ಹಲವೊಂದು ವರ್ಷಗಳ ಹಿಂದೆ ಪೂಜ್ಯ ಶ್ರೀಗಳು ಹರಿಜನ ಕೇರಿಗೆ ಭೇಟಿ ಇತ್ತರು. ಇದರ ಬಗ್ಗೆ ಪತ್ರಿಕೆಗಳಲ್ಲಿ ಓದಿದ ನನಗೆ ಪೂಜ್ಯ ಮಹಾತ್ಮಾ ಗಾಂಧಿಯವರು ಹರಿಜನರ ಯೋಗಕ್ಷೇಮದ ಸಲುವಾಗಿ ಅನೇಕ ಅನಶನ ವ್ರತ ಕೈಕೊಂಡದ್ದು ನೆನಪಿಗೆ ಬಂದಿತು. ಹರಿಜನರು ನಮ್ಮವರೇ; ಶ್ರೀಗಳು ಅವರಿದ್ದೆಡೆ ಹೋಗಿ ಅವರಿಗೆ ಸಂತಸ ಉಂಟುಮಾಡಿದ್ದು ಸರಿಯೇ. ಅನಂತರ ಹಲವು ಕರ್ಮಠವಾದಿಗಳು ಶ್ರೀಗಳ ಆ ಭೇಟಿಯ ಬಗ್ಗೆ ಅಪಸ್ವರ ಎತ್ತಿದರಂತೆ ! ಜನ್ಮದಿಂದ ಯಾರೂ ಸ್ಪೃಶ್ಯರೂ, ಅಸ್ಪೃಶ್ಯರೂ ಆಗುವುದಿಲ್ಲ ಅಸ್ಪೃಶ್ಯತೆಯ ಕಲಂಕದಿಂದ ಮತಾಂತರ ಭವ್ಯ ಪ್ರಮಾಣದಲ್ಲಿ ಇಂದಿಗೂ ನಡೆದಿದೆ. ದೇಶ ಎರಡು ಹೋಳಾಗುವುದಕ್ಕೂ ಅಸ್ಪೃಶ್ಯತೆಯ ಕಲಂಕವೇ ಕಾರಣವಾಗಿದೆ ! ಪೇಜಾವರ ಶ್ರೀಗಳಂಥ ಪ್ರಗತಿಪರ ವಿಚಾರದ ಧೀಮಂತ ವ್ಯಕ್ತಿತ್ವದ ಮಠಾಧೀಶರು, ನೂರು ವರುಷಗಳ ಹಿಂದೆ ಕಾಶ್ಮೀರ ದಲ್ಲಿ ಕಂಗೊಳಿಸುತ್ತಿದ್ದರೆ, ಇಂದು ಕಾಶ್ಮೀರ ಸಮಸ್ಯೆಯೆ ತಲೆ ಎತ್ತುತ್ತಿರಲಿಲ್ಲ ಎಂದು ಧೈರ್ಯವಾಗಿ ಹೇಳ ಬಹುದಾಗಿದೆ.

ಚಿಕ್ಕಂದಿನಿಂದ ಸ್ವಾಮಿ ವಿವೇಕಾನಂದರ ಬಗ್ಗೆ ಹಾಗೂ ಅವರ ಕೃತಿಗಳನ್ನು ಓದಿ ಅವರ ಮಹಾ ವ್ಯಕ್ತಿತ್ವಕ್ಕೆ ಮಾರು ಹೋದ ನಾನು, ಪೂಜ್ಯ ಪೇಜಾವರ ಶ್ರೀಗಳವರ ವ್ಯಕ್ತಿತ್ವದಲ್ಲಿ ಅವರ ಛಾಯೆಯನ್ನು ಕಾಣುತ್ತಿದ್ದೇನೆ. ಪೇಜಾವರ ಶ್ರೀಗಳು ಇಲ್ಲಿಯ ವರೆಗೆ ನಡೆದು ಬಂದ ದಾರಿ ನಾಡಿನ ಕ್ಷೇಮಕ್ಕೆ , ಐಕ್ಯತೆಗೆ , ಸಮಗ್ರತೆಗೆ , ಸುಭದ್ರತೆಗೆ ಸರಿಯಾದ ದಾರಿಯಾಗಿದೆ. ಆ ದಾರಿಯಲ್ಲಿ ನಡೆಯಲು ಭಗವಂತನು ನಮ್ಮನ್ನು ಇನ್ನಷ್ಟು ಪ್ರೇರೇಪಿಸಲಿ. ಪೂಜ್ಯ ಶ್ರೀಗಳವರು ನೂರು ವಸಂತ ನಮ್ಮ ಮಧ್ಯೆ ಇದ್ದು ನಮ್ಮನ್ನು ಆಶೀರ್ವದಿಸಲಿ, ಅನುಗ್ರಹಿಸಲಿ !

(‘ಶ್ರೀ ವಿಶ್ವೇಶ’ ಸಂ. – ವರದರಾಜ ಹುಯಿಲಗೋಳ, ಪ್ರ – ಸನ್ಮಾನ ಸಮಿತಿ, ಧಾರವಾಡ – ೧೯೯೦.)

●

೫-೧೧

# ದೇವಸಮಾನರು ಶ್ರೀ ವಿಶ್ವೇಶತೀರ್ಥರು

ಸಾವಿರಾರು ವಿದ್ಯಾರ್ಥಿಗಳ ಕಿಕ್ಕಿರಿದು ತುಂಬಿದ ಸಭಾಭವನ. ಆ ಮಂತ್ರಮುಗ್ಧ ವಿದ್ಯಾರ್ಥಿಗಳ ಕಣ್ಣುಗಳು ಕಮಲಪುಷ್ಪದಲ್ಲಿ ಕುಳಿತು ಮಧುವನ್ನು ಹೀರುವ ದುಂಬಿಗಳಂತೆ ವೇದಿಕೆಯ ಮಧ್ಯದಲ್ಲಿ ಮಂಡಿಸಿದ ಕಾಷಾಯ ವಸ್ತ್ರಧಾರಿ ವ್ಯಕ್ತಿಯನ್ನು ಸುತ್ತುಬಳಸಿದ್ದವು. ಎಂತಹ ಮೇಧಾವಿಗಳಾದ ಭಾಷಣಕಾರರ ಸಭೆಯಲ್ಲೂ ಗದ್ದಲ ಮಾಡುವುದೇ ತಮ್ಮ ಧರ್ಮವೆಂದು ತಿಳಿದ ವಿದ್ಯಾರ್ಥಿಗಳ ಅದೇ ಸಮೂಹ ಅಂದು ಸ್ತಬ್ಧವಾಗಿತ್ತು. ಎರಡು ನಿಮಿಷ ತಡವಾಗಿ ಸಭಾಭವನ ಪ್ರವೇಶಿಸಿದ ನನಗೆ ವಿಸ್ಮಯವು ಕಾಯ್ದಿತ್ತು. ಕಣ್ಣ ರೆಪ್ಪೆಯನ್ನೂ ಅಲುಗಿಸದೆ ಅನಿಮಿಷರಂತೆ ಕುಳಿತ ವಿದ್ಯಾರ್ಥಿಗಳ ದೃಷ್ಟಿಕೇಂದ್ರ ಹುಡುಕಿದೆ. ಚಳಿಗಾಲದ ಸೂರ್ಯನಿಲ್ಲದ ಬೆಳಗಿನ ಮಂದ ಪ್ರಕಾಶದಲ್ಲಿ ತೇಜೋಮಯರಾದ ಒಬ್ಬ ಸತ್ಪುರುಷರು ಕುಳಿತಿದ್ದಾರೆ. ದರ್ಶನದ ಗಳಿಗೆಯಲ್ಲೇ ನನ್ನ ಕೈಗಳೆರಡೂ ನನಗರಿವಿಲ್ಲದಂತೆ ಜೋಡಿಸಿಕೊಂಡು ವಂದಿಸಿದವು. ಬಹುಶಃ ನನ್ನ ಆತ್ಮವು ಆ ಮಹಾನ್ ಆತ್ಮದ ಮಹತಿಯನ್ನು ನಿಮಿಷಾರ್ಧದಲ್ಲಿ ಗುರುತಿಸಿದ ಕ್ಷಣವದು ! ಚಿಕ್ಕ ನಿಲುವಿನ, ಚೊಕ್ಕ ಬಂಗಾರದಂತೆ ಹೊಳೆಯುವ ಮುಖ ಮಂಡಲದಲ್ಲಿ ಎರಡು ಸೂರ್ಯನಂಥ ಕಣ್ಣುಗಳು... ನೋಡಿಯೇ ಯಾರಾದರೂ ತಲೆಬಾಗುವಂತಹ ದಿವ್ಯ ವ್ಯಕ್ತಿತ್ವ ... ಅವರ ತುಟಿಗಳಿಂದ ಹೊರಟ ಮಾತು 'ಮುತ್ತಿನ ಹಾರದಂತೆ, ಸ್ಫಟಿಕದ ಸಲಾಕೆಯಂತೆ, ಮಾಣಿಕ್ಯದ ದೀಪ್ತಿಯಂತೆ'... ಶ್ರೀಬಸವೇಶ್ವರರು ಇಂತಹ ಮಹಾತ್ಮರ ಮಾತುಗಳನ್ನು ಕೇಳಿಯೇ ಬರೆದಿರಬಹುದೇ ? ಎಂದುಕೊಂಡೆ. ಆಕಾಶದಿಂದ ಧಾರಾಕಾರವಾಗಿ ಸುರಿಯುವ ಶ್ರಾವಣದ ಮಳೆಯಂತೆ ಹೃದಯದಿಂದ ಹೊರಟು ಹೃದಯವನ್ನೂ ಸೇರಿ ತಣಿಸುವಂತಹ ಆ ಮಾತುಗಳು !!... ವಿದ್ಯಾರ್ಥಿಗಳಂತೆ ನಾನೂ ಮಂತ್ರಮುಗ್ಧಳಾಗಿ ಜಗತ್ತಿನ ಪರಿವೆಯೇ ಇಲ್ಲದಂತೆ ಕುಳಿತೆ. ಕೊಡ ತುಂಬಿ ತುಳುಕುವಂತೆ ಆ ಜ್ಞಾನನಿಧಿಗಳ ಒಂದೊಂದು ಮಾತು ಸತ್ಯದ ಒಂದೊಂದು ಮುಖದ ದರುಶನ ಮಾಡಿಸುತ್ತಿದ್ದವು. ಹಸಿದ ಮರಿಗಳಿಗೆ ಹಿತಮಿತವಾದ ಗುಟುಕನ್ನು ನೀಡುವ ತಾಯಿಹಕ್ಕಿಯಂತೆ ಸಭಿಕರಿಗೆ ಪೂಜ್ಯ ಶ್ರೀಗಳವರು ಸುಜ್ಞಾನದ ಪಾಯಸಕ್ಕೆ ತಮ್ಮ ವಾತ್ಸಲ್ಯದ ತುಪ್ಪ ಬೆರಸಿ ಉಣಿಸುತ್ತಿದ್ದರು ! ಅವರ ಅಸ್ಖಲಿತ ವಾಣಿ, ಅನುಪಮ ವಿಶ್ಲೇಷಣೆ, ಸುಂದರ ಅಲಂಕಾರ, ಪ್ರತಿಮಾ ವಿಧಾನಗಳು ನನ್ನ ಮನಸ್ಸನ್ನು ಸೂರೆಗೊಂಡವು. ಕತ್ತಲೆಯಿಂದ ಬೆಳಕಿನೆಡೆಗೆ ಜನತೆಯನ್ನು ಕೈಹಿಡಿದು ನಡೆಯಿಸುವ ವ್ಯಕ್ತಿಗೆ ಆ ಜ್ಞಾನ, ಆ ಕಳಕಳಿ, ಆ ವಾಕ್ಪಟುತ್ವ ಅತ್ಯಗತ್ಯ. ನಮ್ಮ ಪುರಾಣ ಗ್ರಂಥಗಳಲ್ಲಿ ಭಾರತವನ್ನು ಆಳಿದ ಅರಸರು ರಾಜರ್ಷಿಗಳಾಗಿದ್ದರು ಎಂದು ಓದಿದ್ದೇವೆ. ನಮ್ಮ

ದೇಶದ ಇಂದಿನ ವಿಷಮ ಪರಿಸ್ಥಿತಿಯಲ್ಲಿ ಇಂಥ ಧರ್ಮಾತ್ಮರು ತಮ್ಮ ಜನಾನುರಾಗದಿಂದ ಇಂದು ಅನಭಿಷಿಕ್ತ ದೊರೆಗಳಾಗಿದ್ದುದು ನಮ್ಮ ಭಾಗ್ಯ, ನಮ್ಮ ಪುಣ್ಯ. ನಮ್ಮ ಇಂದಿನ ಕಾಲದಲ್ಲಿ ಜ್ಞಾನಿಗಳ ಸಂಖ್ಯೆಯೇ ಚಿಕ್ಕದು; ಇದ್ದ ಜ್ಞಾನವನ್ನು ಕೊಡುವವರು ಇನ್ನೂ ಕಡಿಮೆ ಜನ... ಅದರಲ್ಲೂ ಜ್ಞಾನವನ್ನೂ ಅರಿವನ್ನೂ ಪ್ರೀತಿಯಿಂದ ಮುಕ್ತ ಮನದಿಂದ ಎರಡೂ ಕೈಗಳನ್ನೆತ್ತಿ ಜನತೆಗೆ ಧಾರೆ ಎರೆಯುವ ಶ್ರೀಗಳವರ ಮಾತೃಹೃದಯ ನನಗೆ ಅತ್ಯಂತ ಪೂಜನೀಯವಾಗಿ ತೋರಿತು. ಸ್ವತಃ ಶ್ರೀಗಳವರೇ ಹೇಳಿದ ಒಂದು ಉದಾಹರಣೆ ನೆನಪಾಗುತ್ತದೆ: 'ಹೊಳೆಹಳ್ಳಗಳ ನೀರನ್ನೆಲ್ಲ ಶೇಖರಿಸಿದ ಸಮುದ್ರದ ನೀರು ಉಪ್ಪಾಯ್ತು... ಆದರೆ ತನ್ನ ಹೃದಯ ತೆರೆದು ಪಡೆದ ನೀರನ್ನೆಲ್ಲ ಧಾರೆ ಎರೆವ ಮೋಡದ ನೀರು ಸಿಹಿಯಾಯ್ತು'. ಪೂಜ್ಯರ ಮಾತು ಮೆಲುಕು ಹಾಕಿದಷ್ಟು ಸಿಹಿಯಾಗಿ ಒಳಗೆ ಬೇರೂರಿ ನಿಲ್ಲುವ ಮಾತು.

'ಸಾಣೆ ಕಲ್ಲೊಳು ಗಂಧ ಮಾಣದಲೆ ಎಸೆವಂತೆ ಜಾಣ ಗುರುವಿನುಪದೇಶದಿ ಮುಕ್ತಿ ಕಾಣಿಸುತ್ತಿಹುದು ಸರ್ವಜ್ಞ'. ಸರ್ವಜ್ಞನ ಈ ವಚನದಂತೆ ಶ್ರೀಗಳವರ ಉಪದೇಶಗಳಲ್ಲಿ ನಮ್ಮ ಸಮಸ್ಯೆಗಳಿಗೆ ಮುಕ್ತಿ ತಾನೇ ತಾನಾಗಿ ದೊರಕುತ್ತದೆ.

ಶ್ರೀಗಳವರ ಕ್ರಾಂತಿಕಾರಕ ವಿಚಾರಗಳು, ಕೃತಿಗಳನ್ನು ಕುರಿತು ತಿಳಿದ ನನಗೆ ಅವರಲ್ಲಿ ವಿಶಿಷ್ಟ ವ್ಯಕ್ತಿತ್ವ ಕಂಡಿದ್ದೇನೆ. ನೂರೆಂಟು ಜಪಮಣಿ ಎಣಿಸುತ್ತ ಮಠಗಳ ಒಳಕೋಣೆಗಳಲ್ಲಿ ದೇವರ ಧ್ಯಾನ ಮಾಡುತ್ತ, ಕೆಲ ಸಮಯ ಭಕ್ತಾದಿಗಳಿಗೆ ದರ್ಶನ ನೀಡುತ್ತ, ಹಳೆಯ ಆಚಾರ ವಿಚಾರಗಳ ಪಂಜರದಲ್ಲೇ ಆಯುಷ್ಯ ಕಳೆಯುವ ಸಾಧುಸನ್ಯಾಸಿಗಳಿಂದ ತುಂಬಿದೆ ನಮ್ಮ ದೇಶ. ಆದರೆ ಸವಕಲಾದ ಸಂಪ್ರದಾಯದ ನಾಣ್ಯಗಳನ್ನೆಸೆದು, ಜಾತಿಮತಗಳ ಗೋಡೆಗಳನ್ನು ಕೆಡವಿ, ದೀನದಲಿತರ ಆರ್ತಕರೆಗೆ ಓಗೊಟ್ಟು ಧಾವಿಸುವ ಪೂಜ್ಯರ ಅಂತಃಕರಣ, ಅವರ ಆರಾಧ್ಯದೈವ ಕನಕನಿಗೊಲಿದ ಗೋವಿಂದನ ಪರಮ ಭಕ್ತನಿಗೆ ಒಪ್ಪತಕ್ಕ ಮೌಲಿಕ ಗುಣವಾಗಿದೆ. ಅಸ್ಪೃಶ್ಯರನ್ನೂ ಕಂಡರೆ ಮೈಲಿಗೆ ಎನ್ನುವ ಇಂದಿನ ಕಾಲದಲ್ಲಿ ಶ್ರೀ ಸ್ವಾಮೀಜಿ ಹರಿಜನ ಕೇರಿಗಳಿಗೆ ಭೆಟ್ಟಿ ಇತ್ತು ಅವರ ಕಷ್ಟಸುಖಗಳಲ್ಲಿ ಭಾಗಿಯಾಗಿದ್ದಾರೆ. ಅನೇಕ ಸಲ ಸರ್ವಧರ್ಮ ಸಮ್ಮೇಳನಗಳಲ್ಲಿ ಎಲ್ಲ ಮತಗಳ ಧರ್ಮ ಗುರುಗಳ ಸಾಲಿನಲ್ಲಿ ಕುಳಿತು ಎಲ್ಲರಿಗೆ ಗೌರವ ತೋರುತ್ತ ಸರ್ವಧರ್ಮಗಳ ಮೂಲ ತತ್ತ್ವಗಳನ್ನು ಪ್ರತಿಪಾದಿಸಿದ್ದಾರೆ. ಸಂಪ್ರದಾಯಸ್ಥರಿಗೆ ಶ್ರೀಗಳ ಈ ಹೊಸ ಆಚಾರ ವಿಚಾರಗಳು ಆಘಾತವನ್ನುಂಟು ಮಾಡಿರಬಹುದು. ಆದರೆ ಶ್ರೀಗಳವರು ನಿರ್ಭಯರಾಗಿ ಮುನ್ನಡೆದು ವಿಚಾರವಂತರನ್ನು ವಿಸ್ಮಯಗೊಳಿಸಿದ್ದಾರೆ.

ಪೇಜಾವರ ಶ್ರೀಗಳವರ ಇನ್ನೊಂದು ಮೌಲಿಕ ಗುಣ, ಈ ರಾಷ್ಟ್ರದ ಆಗುಹೋಗುಗಳಿಗಾಗಿ ಅವರಲ್ಲಿದ್ದ ಅಪಾರ ಕಳಕಳಿ. ಕಾಲಧರ್ಮಕ್ಕೆ ತಲೆಬಾಗಿ ಅದನ್ನೂ ಮನ್ನಿಸುವ ವಿಶಾಲ ಹೃದಯ ಅವರಲ್ಲಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ದ್ವಾರಕೆಯಿಂದ ಪುರಿಯವರೆಗಿದ್ದ ಈ ಭೂಮಿಯು ಪೂಜ್ಯರಿಗೆ ಶ್ರೀ ಉಡುಪಿ ಕ್ಷೇತ್ರದ ಶ್ರೀ ಬಾಲಲೋಲ ಶ್ರೀಕೃಷ್ಣನ ಲೀಲಾಭೂಮಿ. ಹಾಗೆ ಅರ್ಥೈಸಿದ ಯತಿವರ್ಯರು ಈ ದೇಶಕ್ಕೆ ಆಪದ್ಬಂಧುಗಳಾಗಿ ದೊರಕಿದ್ದಾರೆ. ಕಳೆದ ನಾಲ್ಕಾರು ವರ್ಷಗಳಿಂದ ಪಂಜಾಬಿನಲ್ಲಿ ನಡೆದ ರಕ್ತಪಾತದ ಸ್ಥಳಕ್ಕೆ ಭೆಟ್ಟಿಯಿತ್ತು ಮಾನವ ಧರ್ಮ ಬೋಧಿಸಿ ಜನರಲ್ಲಿ ಧೈರ್ಯ ತುಂಬಿ ಜನಜಾಗೃತಿ ಉಂಟುಮಾಡಿದ ಕೀರ್ತಿ ಇವರದು. ಆಂಧ್ರಪ್ರದೇಶದಲ್ಲಿ ಬಿರುಗಾಳಿಗೆ ಈಡಾಗಿ ಜನತೆಯನ್ನು ಕಂಡು ಸಂತೈಸಿದ ಅವರ ರೀತಿ ಅನುಪಮವಾದದ್ದು. ಒಂಬತ್ತು ಲಕ್ಷ ರೂಪಾಯಿ ಸಂಗ್ರಹಿಸಿ ಒಂದುನೂರಾ ಐವತ್ತು ಮನೆಗಳನ್ನು ಕಟ್ಟಿಸಿ, ನೀರು, ಆಹಾರ, ಬಟ್ಟೆಗಳನ್ನಿತ್ತು ಸಲಹಿದ ಪೂಜ್ಯರು ಆ ಪ್ರದೇಶದ ಸಂತ್ರಸ್ತರಿಗೆ ಧರೆಗಿಳಿದ ದೇವರಾಗಿ ಕಂಡರು. ಗುಲ್ಬರ್ಗಾ ಜಿಲ್ಲೆಯಲ್ಲಿ ಮೂರು ವರ್ಷಗಳಿಂದ ಮಳೆಯಾಗದೆ ದುಷ್ಕಾಳವು ಒದಗಿದಾಗ ಆ ಸ್ಥಳಕ್ಕೆ ಧಾವಿಸಿ ಗಂಜಿ ಕೇಂದ್ರಗಳನ್ನು ತೆರೆದು ಸಾಯುತ್ತಿರುವ ಹಸು, ದನಕರುಗಳಿಗೆ ಹುಲ್ಲನ್ನು, ಮೇವನ್ನು ಕೊಟ್ಟರು. ಬೆಂಗಳೂರಲ್ಲಿ ಪೂರ್ಣಪ್ರಜ್ಞ ಮಹಾವಿದ್ಯಾಲಯ

ಸ್ಥಾಪಿಸಿ ಸೊರಗಿ ಸಾಯುತ್ತಿರುವ ಭಾರತೀಯ ಸಂಸ್ಕೃತಿ, ಧರ್ಮ, ಸಂಸ್ಕೃತ ಭಾಷೆಗಳ ಪುನರುಜ್ಜೀವನದ ಕಾರ್ಯ ಕೈಕೊಂಡಿದ್ದಾರೆ. ಕರ್ನಾಟಕದ ಹನ್ನೆರಡು ಮುಖ್ಯ ಪಟ್ಟಣಗಳಲ್ಲಿ ಬಡಬ್ರಾಹ್ಮಣ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯ ಕಟ್ಟಿಸಿ ಉಚಿತ ಊಟ, ವಸತಿ ಸೌಕರ್ಯ ಒದಗಿಸಿದ್ದಾರೆ. ಬಡವರಿಗೆ ಉಚಿತ ಚಿಕಿತ್ಸೆ, ಔಷಧೋಪಚಾರದ ಸೌಕರ್ಯ ನೀಡಿದ್ದಾರೆ. ಧಾರವಾಡದ ವಿದ್ಯಾಗಿರಿಯಲ್ಲಿಯ ಮೈಲಾರಲಿಂಗ ದೇವಸ್ಥಾನದ ಸುತ್ತ ಹಬ್ಬಿಕೊಂಡ ಜೆ.ಎಸ್.ಎಸ್.ನ ವಿದ್ಯಾಸಂಸ್ಥೆಗಳು ೧೯೭೩ರಲ್ಲಿ ಆರ್ಥಿಕ ಬಿಕ್ಕಟ್ಟಿನಲ್ಲಿ ಸಿಲುಕಿದಾಗ ಶಾಪಗ್ರಸ್ಥ ಅಹಲ್ಯೆಗೆ ಜೀವದಾನ ಮಾಡಿದ ಶ್ರೀರಾಮನಂತೆ ಪೂಜ್ಯ ಸ್ವಾಮೀಜಿಯವರು ಈ ಸಂಸ್ಥೆಗೆ ಹೊಸ ಕಾಯಕಲ್ಪ ಕೊಡಲು ಶ್ರೀಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿ ಪೂಜ್ಯ ಶ್ರೀ ವೀರೇಂದ್ರ ಹೆಗ್ಗಡೆಯವರಿಗೆ ಕರೆ ಇತ್ತರು. ಹೀಗೆ ಶ್ರೀಗಳವರು, ಶ್ರೀ ವೀರೇಂದ್ರ ಹೆಗ್ಗಡೆಯವರು ಆಪದ್ಬಂಧುಗಳಾಗಿ ಈ ಸಂಸ್ಥೆಗಳನ್ನು ಉದ್ಧರಿಸಿ ನಮಗೆಲ್ಲ ವಂದನೀಯರಾಗಿದ್ದಾರೆ.

ಪ್ರಸ್ತುತ ಭಾರತದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವಿಷಮ ವಾತಾವರಣದಲ್ಲಿ ಸಮಸ್ತ ಭಾರತೀಯ ಜನಾಂಗವೇ ಅನಾಥ ಮಗುವಿನಂತೆ ಕೂಗಿದಾಗ ಈ ಕೂಗಿಗೆ ಓಗೊಟ್ಟು ತಮ್ಮ ಅಭಯಹಸ್ತ ನೀಡಿದ ಪುಣ್ಯ ಕ್ಷೇತ್ರ ಉಡುಪಿಯ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥ ಶ್ರೀಗಳವರು ನನ್ನ ದೃಷ್ಟಿಯಲ್ಲಿ ದೇವಸಮಾನರು.

('ಶ್ರೀ ವಿಶ್ವೇಶ' ಸಂ. - ವರದರಾಜ ಹುಯಿಲಗೋಳ, ಸನ್ಮಾನ ಸಮಿತಿ, ಧಾರವಾಡ – ೧೯೯೦.)

●

೫-೧೨

# ವಿನಯದ ಹೆಗ್ಗಳಿಕೆ

**ಪೇ**ಜಾವರ ಮಠದ ವಿಶ್ವೇಶತೀರ್ಥ ಶ್ರೀಪಾದರ ಮತ್ತು ನನ್ನ ಪರಿಚಯವಾಗಿ ಸುಮಾರು ಮೂವತ್ತು ವರ್ಷಗಳಾಗಿರಬಹುದು. ಮಿತ್ರರಾದ ಶ್ರೀ ಎಸ್. ಆರ್. ಎಕ್ಕುಂಡಿಯವರ 'ಶ್ರೀ ಮಧ್ವಾನಂದತೀರ್ಥರು' ಎಂಬ ನೀಳ್ಗವಿತೆಗೆ ಅವರು ಮುನ್ನುಡಿ ಬರೆದಾಗ ಓದಿ ಚಕಿತನಾಗಿದ್ದೆ. ಸ್ವಾಮಿಗಳಿಗೂ ಸಾಹಿತ್ಯಕ್ಕೂ ಏನು ಸಂಬಂಧವೆಂದು ಗೊತ್ತಿರದ ಕಾಲ ಅದು. ಚಲನಚಿತ್ರದ ನಟನಿಗೆ ವೇದಾಂತ ಹೇಗೋ ಸ್ವಾಮಿಗಳಿಗೆ ಕಾವ್ಯ ಹಾಗೆಂದು ನಾನು ತಿಳಿದಿದ್ದೆ. ಅದಕ್ಕೆ ವಿಪರೀತವಾಗಿ ಶ್ರೀಪಾದರ ಮುನ್ನುಡಿಯಲ್ಲಿಯ ಆಳವಾದ ಕಾವ್ಯಪ್ರಜ್ಞೆ ನನಗೆ ಸಂತೋಷವನ್ನುಂಟು ಮಾಡಿತು.

ಅವರ ಮುಖತಃ ಪರಿಚಯ ನನಗಾದದ್ದು ಉಡುಪಿಯಲ್ಲಿ. ಆಗ ಅವರು ಪರ್ಯಾಯ ಪೀಠಸ್ಥರಾಗಿದ್ದರು. ಶ್ರೀಕೃಷ್ಣ ಮಠಕ್ಕೆ ನನ್ನನ್ನೂ ಕರೆಸಿಕೊಂಡು ಒಂದು ಉಪನ್ಯಾಸವನ್ನು ಮಾಡಿಸಿದ್ದರು. ಬೇರೊಂದು ಕೆಲಸಕ್ಕಾಗಿ ಹೋಗಿದ್ದ ನಾನು ಆಗ ನಾಲ್ಕೈದು ದಿನಗಳವರೆಗೆ ಅಲ್ಲಿ ಇರಬೇಕಾಗಿತ್ತು. ಅವರಾಗ ಮಧ್ವನವಮಿಯ ಉತ್ಸವದ ಏರ್ಪಾಡು ಮಾಡುತ್ತಿದ್ದರು. ದಿನಾಲು ರಾತ್ರಿ ಬನ್ನಂಜೆಯವರೊಂದಿಗೆ ಅಲ್ಲಿಗೆ ಹೋಗುತ್ತಿದ್ದೆ. ನಮ್ಮ ಜೊತೆಗೆ ಗೆಳೆಯರಂತೆ ಅವರು ಮಾತಾಡುತ್ತಿದ್ದ ನೆನಪು ಇನ್ನೂ ಹಸಿರಾಗಿದೆ.

ಅಲ್ಲಿಂದೀಚೆಗೆ ನಾನು ಹಲವಾರು ಸಲ ನೋಡಿದ್ದೇನೆ. ಅವರೊಡನೆ ವ್ಯವಹಾರ ಅತ್ಯಂತ ಸರಳ ಹಾಗೂ ಬಿಚ್ಚು ಮನಸ್ಸಿನದು. ಉಳಿದ ಸ್ವಾಮಿಗಳಂತೆ ಕೇವಲ ಮಠದ ಧಾರ್ಮಿಕ ಕಾರ್ಯಕಲಾಪಗಳ ಮಿತಿಯಲ್ಲಿಯೇ ಕೆಲಸ ಮಾಡದೆ ಅವರ ಕಾರ್ಯಪ್ರವೃತ್ತಿ ಬಹಿರ್ಮುಖವಾಗಿ, ಸಮಾಜದ ಅಭಿವೃದ್ಧಿಗೆ ಮನಸ್ಸು ಮಾಡಿದೆ. ಸನ್ಯಾಸಿಯಾದವನ ಬುದ್ಧಿ ಸುವರ್ಣಮಯವಾಗಿ ಹೃದಯ ಕಾಷ್ಠಮಯವಾಗಿ ಹೋಗಬಾರದೆಂದು ಗದುಗಿನಲ್ಲಿ ಹಿಂದೆ ಅವರು ತಮ್ಮ ಭಾಷಣದಲ್ಲಿ ಹೇಳಿದ್ದರು. ಲೋಕಸಂಗ್ರಹ ಯತಿಯಾದವನ ಕರ್ತವ್ಯಗಳಲ್ಲಿ ಒಂದಾಗಿದ್ದರೂ, ಲೋಕವ್ಯವಹಾರದ ಭ್ರಷ್ಟತೆಯ ಸೊಗಡಿನಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಆದರೆ ಮನೆಯನ್ನು ಬಿಟ್ಟು ಲೋಕಸಂಸಾರದಲ್ಲಿ ತನ್ನನ್ನು ತೊಡಗಿಸಿಕೊಂಡವನಿಗೆ ಇದು ಅನಿವಾರ್ಯ. ಶ್ರೀಪಾದರ ಕಾರ್ಯ ಸಮೂಹ ವೈವಿಧ್ಯಮಯವಾಗಿರುವುದರಿಂದ ಅದನ್ನೆಲ್ಲ ಇಲ್ಲಿ ವಿವರವಾಗಿ ಹೇಳುವುದು ಸಾಧ್ಯವಿಲ್ಲ. ಅವರು ಸ್ಥಾಪಿಸಿದ ವಿದ್ಯಾರ್ಥಿನಿಲಯಗಳಲ್ಲಿ ಹೊಸ ಸಮಾಜವೊಂದು ರೂಪುಗೊಂಡು, ಮೌಲ್ಯವ್ಯವಸ್ಥೆಯನ್ನು ಸರಿಪಡಿಸಿ, ಮುಂದಿನ ಯುಗಕ್ಕೆ ಅವರ ಕರ್ತೃತ್ವ ಶಕ್ತಿಗೆ ಸಾಕ್ಷಿಯಾಗಿ ನಿಲ್ಲಬಹುದಾಗಿದೆ. ಆ ಕಾಲ ದೂರವೇನೂ ಇಲ್ಲ.

ವಿಶ್ವೇಶತೀರ್ಥ ಶ್ರೀಪಾದರು ಅತ್ಯಂತ ವಿನಯಪರರು, ಹಸುಮಗುವಿನಂತಹ ಮನಸ್ಸು ಅವರದು. ಯತಿಗಳ ಗಾಂಭೀರ್ಯ ಸ್ಥಾಯಿಯಾಗಿ ಪೆಡಸಾಗಿ ಉಳಿಯುವುದೇ ಹೆಚ್ಚು. ವಿನಯ ಮಾಧ್ವ ಸಿದ್ಧಾಂತದ ಒಳತಿರುಳಾಗಿದೆ. ಅಹಂಭಾವ ತಾತ್ತ್ವಿಕವಾಗಿ ಕೂಡ ಉಳಿಯಬಾರದೆಂಬ ನಿಲುವಿನಿಂದಲೇ ದ್ವೈತ ಅದ್ವೈತದಿಂದ ಬೇರೆಯಾಗಬೇಕಾಯಿತಲ್ಲದೆ ಬೇರೆ ಭೇದಗಳೆಂದೂ ಇಲ್ಲ. ಪಂಚಭೇದಗಳ ತಿಳುವಳಿಕೆಯ ಮೂಲದಲ್ಲಿ ಈ ವಿನಯವಿದೆ. ವಿನಯ ಕೇವಲ ಒಂದು ಸಾಮಾಜಿಕ ನೀತಿಯಾಗದೆ ಪಾರಮಾರ್ಥಿಕ ತಿಳುವಳಿಕೆಯಾದರೆ ಹೇಗಿರಬಹುದೆಂಬುದನ್ನು ಶ್ರೀಪಾದರ ಆಚಾರದಿಂದಲೇ ತಿಳಿಯಬಹುದಾಗಿದೆ.

ಇಂತಹ ಪಾರಮಾರ್ಥಿಕ ತಿಳುವಳಿಕೆಗೇ ನಾವು ಮನುಷ್ಯನ ದೈವ ಎಂದು ಕರೆಯುವುದು. ವಿನಯ ದೈವವಾದರೆ ಅದು ಮನುಷ್ಯನ ನಡವಳಿಕೆ, ಮಾತುಕತೆಗಳಷ್ಟನ್ನೇ ಅಲ್ಲ, ಅವನ ಮುಖಭಾವವನ್ನು ಕೂಡ ರೂಪಿಸಿಬಿಡುತ್ತದೆ. ಮನುಷ್ಯನ ಜೀವನ ಪ್ರವಾಹ ಅವನಿಗೆ ಅರಿವಾಗದೆ ಈ ದೈವದತ್ತ ಸಾಗುತ್ತಿರುತ್ತದೆ. ಯತಿಯಾಗಲಿ, ಗೃಹಸ್ಥನಾಗಲಿ ಅವರವರಿಗೆ ಅವರವರ ದೈವ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯುತ್ತಿರುತ್ತದೆ. ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು ಇವರು ಕೂಡ ಮಾಧ್ವ ಸಂಪ್ರದಾಯದ ಸ್ವಾಮಿಗಳೇ. ಆದರೆ ಅವರ ದೈವದಲ್ಲಿ 'ರಾಜ'ರಾಗುವುದಿತ್ತು. ಈ ಸ್ವಾಮಿಗಳಿಗೆ ಆಗಿನ ಕಾಲದ ರಾಜದರ್ಪ ಸವಾಲು ಹಾಕಿತ್ತು, ಅವರು 'ರಾಜ'ರಾಗಿ ಉತ್ತರವಿತ್ತರು. ನಮ್ಮ ಈ ಶ್ರೀಪಾದರಿಗೆ ಇಂದಿನ ಪ್ರಜಾಪ್ರಭುತ್ವ ಸವಾಲು ಹಾಕುತ್ತಿದೆ. ಇಂತಹ ಕಾಲದಲ್ಲಿ ಯತಿಯಾದವನು ಏನು ಮಾಡುತ್ತಾನೆಂಬುದು ಮುಖ್ಯವಲ್ಲ, ಹೇಗೆ ಇರುತ್ತಾನೆನ್ನುವುದು ಮುಖ್ಯವಾಗಿದೆ. ಸನ್ಯಾಸಿಗೆ ವಿಹಿತವಾಗಿರುವ ಒಂದು ಧರ್ಮವಿದೆ; ಜಪ, ತಪ, ಆಚಾರ, ಅನುಷ್ಠಾನಗಳಿವೆ, ನೂರೆಂಟು ನಿಯಮಗಳಿವೆ. ಸಮಸ್ಯೆ ಎಂದರೆ ಈ ನೀತಿಸಂಹಿತೆಯನ್ನು ಅವನು ಹುಟ್ಟುಹಾಕಿಲ್ಲ. ಆದ್ದರಿಂದ ವಿಶ್ವೇಶತೀರ್ಥರು ಇನ್ನೊಂದು ಪಥವನ್ನು – ತಾವೇ ಕಂಡುಕೊಂಡದ್ದನ್ನು ಹಿಡಿದರು. ಉಡುಪಿಯ ಕಡೆಗೋಲು ಕೃಷ್ಣನನ್ನು ಅರ್ಚಿಸುತ್ತ ನವನೀತವನ್ನು ಮರೆಯಲಿಲ್ಲ. ಇದೇ ಅವರ ಹೆಗ್ಗಳಿಕೆ, ಗೌರವ.

('ಶ್ರೀ ವಿಶ್ವೇಶ', ಸಂ. – ವರದರಾಜ ಹುಯಿಲಗೋಳ, ಪ್ರ – ಸನ್ಮಾನ ಸಮಿತಿ ಧಾರವಾಡ –೧೯೯೦.)

●

೫-೧೩

# ಶ್ರೀಪಾದ ವಿಜ್ಞಪ್ತಿ

ಕದ ಮುಚ್ಚಿರೆ ಎದೆ ಎಚ್ಚರ ಕಳಕೊಂಡಿದೆ ಖೋಡಿ
ಬಂಗಾರದ ಸಿಂಗಾರಕೆ ಹರಿದಿದೆ ಕಂಬನಿ ಕೋಡಿ
ಸೋತಾಗಿದೆ, ಕೂತಾಗಿದೆ ಸರಿದಾರಿಯ ತಡಕಾಡಿ
ವಿಷಮೋನ್ನತ – ಹತ ಪಥದಲಿ ಮುನ್ನಡೆಯದು ಗಾಡಿ
ಪಥ ಮುಟ್ಟಿದೆ ರಥ ಕೆಟ್ಟಿದೆ ಇದನಾದರೂ ನೋಡಿ
ವಿಷಮಜ್ವರ ಕಾವೇರಿದೆ ತುಡಿಯುತ್ತಿದೆ ನಾಡಿ
ಅರವಿಂದದ ದಳ – ದಳವೂ ಕಳೆಗುಂದಿದೆ ಬಾಡಿ
ಮುಂಜಾವದ ಮರಿಬಿಸಿಲಿಗು ಮಂಜುಗವಿದ ಮೋಡಿ
ರಾಧೆಯ ಬಗೆ ಬರಿದಾಗಿದೆ ತೋಡಿ ರಾಗ ಹಾಡಿ
ಕಣ್ ಬತ್ತಿದೆ, ಬೇಸತ್ತಿದೆ ಬಗೆಯಳಲನು ತೋಡಿ
ನನಗೇತಕೆ ಸುಮ-ಸುಮ್ಮಗೆ ಇಂಥ ಜನರ ಚಾಡಿ
ಏನಾದರು ಎಂತಾದರು ಇದನೊಂದನು ಮಾಡಿ:
''ಕೃಷ್ಣನ ಗೋಪುರದೆದುರಲಿ ತೆರೆದನು
ಕಿಂಡಿಯೊಂದನು ಕನಕ
ಕೃಷ್ಣನ ಭಕ್ತರ ಹೃದಯಗೋಪುರದ
ಕಿಂಡಿಯ ತೆರೆಯಿರಿ ನೀವನಕ''

('ನಿವೇದನ', 'ತತ್ತ್ವವಾದ' ವಿಶೇಷ ಸಂಪುಟ, ೧೯೭೮.)

●

೫-೧೪

# ಶ್ರೀ ವಿಶ್ವೇಶತೀರ್ಥ ಶ್ರೀಗಳಿಗೆ

ಈ ಕಮಂಡಲು ತುಂಬ ಕರುಣೆಯಿದೆ ಪ್ರೀತಿಯಿದೆ .
ಮೂರು ಲೋಕವನಳೆದ ಚರಣಕಮಲದೊಳಿಡುವ
ಹೂಗಳಿವೆ . ವಿಠ್ಠಲನ ನೆನಪು ನಿಧಿಯನು ಕೊಡುವ
ಹರಕೆಯಿದೆ . ಮುಗುಳುನಗೆ ಮೊಳೆತ ನಿರ್ಭೀತಿಯಿದೆ .
ಕೊಳಲನೂದುವ ಗೊಲ್ಲಗೀವ ಕೆನೆ ಮೊಸರು ಇದೆ .
ಕೊಟ್ಟಿಗೆಯ ಕರು ಬಿಚ್ಚಿ ಕೊರಳ ಹಗ್ಗವ ಹಿಡಿದು
ಕಡಗೋಲು ಕೈಗೆತ್ತಿಕೊಂಡು ಮಧ್ವರಿಗೊಲಿದು
ಬಂದಿರುವ ಹುಡುಗನಿಗೆ ಕೊಡುವ ಕೆನೆಹಾಲು ಇದೆ .
ಮೂಲಮೂವತ್ತೇಳು ಗ್ರಂಥಗಳ ಮಕರಂದ
ಇದರೊಳಿದೆ . ಬದರಿಯಲಿ ಬೆಳೆದ ವೃಕ್ಷದ ಹಣ್ಣು
ಸೌಜನ್ಯ ಕುಳಿತಿಹುದು ತೆರೆದು ತಿಳಿವಿನ ಕಣ್ಣು .
ಬಿಡಿಸತೊಡಗಿದೆ ಮಾತು ಭವದ ಸಾವಿರ ಬಂಧ .
ವಿಷ್ಣು ಪಾದೋದಕವ ಕುಡಿದು ಈ ಜೀವ
ಹಗಲಿರುಳು ಪವಣಿಸಿದೆ ಹೃದಯಗಳ ಹೂವ .

('ನಿವೇದನ ', 'ತತ್ತ್ವವಾದ ' ವಿಶೇಷ ಸಂಚಿಕೆ, ೧೯೭೭೮, ಶ್ರೀ ಸು. ರಂ. ಎಕ್ಕುಂಡಿಯವರ 'ಶ್ರೀಮದಾನಂದತೀರ್ಥರು' ಖಂಡಕಾವ್ಯಕ್ಕೆ ಶ್ರೀ ವಿಶ್ವೇಶತೀರ್ಥರು ಮುನ್ನುಡಿ ಬರೆದಿದ್ದಾರೆ — ಸಂ.)

●

೫-೧೫

# ಶ್ರೀಗಳವರು ಮತ್ತು ಪರಿವಾರ

ಶ್ರೀ ರಘುರಾಮಾಚಾರ್ಯರು ಪೇಜಾವರ ಶ್ರೀಪಾದರ ಪೂರ್ವಾಶ್ರಮದ ತಮ್ಮಂದಿರು. ಉಡುಪಿಯ ಪೇಜಾವರ ಮಠದ ಜವಾಬ್ದಾರಿ ಮತ್ತು ಮುಂದಿನ ಪರ್ಯಾಯದ ಹೆಚ್ಚಿನ ಹೊಣೆಗಾರಿಕೆಗಳನ್ನು ಹೊತ್ತವರು. ಉತ್ಸಾಹ, ಕರ್ತೃತ್ವ ಶಕ್ತಿಗಳಲ್ಲಿ ಶ್ರೀಗಳವರನ್ನು ಜ್ಞಾಪಿಸಿಕೊಡುವ ವ್ಯಕ್ತಿತ್ವ ಇವರದು. ಶ್ರೀಗಳವರ ಬಗ್ಗೆ ಅವರ ಅನಿಸಿಕೆ ಹೀಗೆ –

''ನಾನು ಮೊದಲಿನಿಂದ ಸ್ವಾಮಿಗಳನ್ನು ವಿಶ್ವೇಶತೀರ್ಥರನ್ನಾಗಿಯೇ ಕಂಡವನು. ಅವರ ಪೂರ್ವಾಶ್ರಮದ ವ್ಯಕ್ತಿತ್ವ ನನ್ನ ಮನಸ್ಸಿನಿಂದ ಎಂದೋ ಅಳಿಸಿ ಹೋಗಿದೆ. ಆದ್ದರಿಂದ ಮೊದಲಿನಿಂದಲೂ ನನಗೆ, ನಿಮ್ಮೆಲ್ಲರಂತೆ ಅವರು ಗುರುಗಳಾಗಿದ್ದಾರೆಯೇ ಹೊರತು ನನ್ನ ರಕ್ತಸಂಬಂಧಿ ಎಂಬ ಭಾವನೆ ಅವರಲ್ಲಿ ಮೂಡಲು ಅವಕಾಶವೇ ಇರಲಿಲ್ಲ. ಸ್ವಾಮಿಗಳ ದೃಷ್ಟಿಯಲ್ಲಿ ನಾನೊಬ್ಬ ಮಠದ ಅಭಿಮಾನಿ ಕಾರ್ಯಕರ್ತ ಅಷ್ಟೇ. ಮಠದ ಜವಾಬ್ದಾರಿಯಲ್ಲಿ, ತಪ್ಪಿದಾಗ ಶ್ರೀಗಳವರ ಆಕ್ರೋಶದಲ್ಲಿ ಉಳಿದವರಂತೆ ನಾನೂ ಸಮಭಾಗಿ. ಆದರೆ ಮಠದಲ್ಲಿ ವಿಶೇಷ ಕಾರ್ಯಕ್ರಮಗಳೇನಾದರೂ ನಡೆಯಬೇಕಾದರೆ ನಮ್ಮೆಲ್ಲರನ್ನು ಜೊತೆ ಸೇರಿಸಿ ವಿಚಾರ ವಿನಿಮಯ ಮಾಡುತ್ತಾರೆ. ಅಂತೆಯೇ ನಾವೂ ಯಾವುದೇ ಸಂದರ್ಭದಲ್ಲೂ ನಮ್ಮ ತೀರ್ಮಾನವೇ ಅಂತಿಮವೆಂದು ತಿಳಿಯುವುದಿಲ್ಲ. ಸ್ವಾಮಿಗಳು ಊರಲ್ಲಿರದಿದ್ದರೂ ಅವರ ಅನುಮತಿಯನ್ನು ಪಡೆದೇ ಕಾರ್ಯತತ್ಪರರಾಗುತ್ತೇವೆ.

ಈಗ ಪರ್ಯಾಯದ ಸಿದ್ಧತೆ ಭರದಿಂದ ನಡೆಯುತ್ತಿದೆ. ನಾನು ಸರಕಾರೀ ಉದ್ಯೋಗದಲ್ಲಿದ್ದರೂ ಬಿಡುವಿನ ಸಂದರ್ಭಗಳನ್ನೆಲ್ಲಾ ಮಠದ ಕೆಲಸಗಳಿಗಾಗಿ ವಿನಿಯೋಗಿಸುತ್ತೇನೆ. ಮುಂದೆ ಉದ್ಯೋಗಕ್ಕೆ ವಿಶ್ರಾಂತಿಯನ್ನೂ ಪಡೆಯಬೇಕಾಗುತ್ತದೆ. ಹೀಗೆ ನನ್ನಂತೆಯೇ ಅನೇಕ ಮಂದಿ ಮಠದ ಕಾರ್ಯಗಳಿಗಾಗಿ ಶ್ರಮಿಸುತ್ತಿದ್ದಾರೆ. ನಮ್ಮ ತ್ಯಾಗ, ಪರಿಶ್ರಮಗಳಿಗೆಲ್ಲಾ ಸ್ವಾಮಿಗಳ ನಿಃಸ್ವಾರ್ಥ, ಜನೋಪಯೋಗಿ ವ್ಯಕ್ತಿತ್ವವೇ ನಮಗೆ ಸ್ಫೂರ್ತಿ. ಅವರ ಅವಿಶ್ರಾಂತ ದುಡಿಮೆಗೆ ನಮ್ಮ ಈ ಪರಿಶ್ರಮದ ಸಹಾಯ ಅತ್ಯಲ್ಪ.''

ಮಠದ ಪ್ರಸಕ್ತ ದಿವಾನಗಿರಿ ಶ್ರೀ ಗುಂಡಾಚಾರ್ಯರದು. ವಯಸ್ಸಿನಲ್ಲಿ ಶ್ರೀಗಳವರಿಗಿಂತಲೂ ಹಿರಿಯರು. ಸಂಪ್ರದಾಯಜ್ಞರು. ಅನುಭವಿ ಕಾರ್ಯಕರ್ತರು. ಜನರನ್ನು ಮಾತಿನಲ್ಲೇ ಆಕರ್ಷಿಸುವ ಜಾಣ್ಮೆಯುಳ್ಳವರು. ಬೇಸರದ ಸಂದರ್ಭದಲ್ಲಿ ಶ್ರೀಗಳವರನ್ನು ನಗಿಸುವ ಹಾಸ್ಯಪ್ರವೃತ್ತಿಯವರು. ಇದರಿಂದ ಇವರು ಸಂಸ್ಥಾನದ ವಿದೂಷಕನೂ ಹೌದು.

ಶ್ರೀ ಗುಂಡಾಚಾರ್ಯರು ಹೀಗೆನ್ನುತ್ತಾರೆ –

ಕಾಪು ಕೃಷ್ಣಾಚಾರ್ಯರು ಮಠದ ಮೊದಲ ದಿವಾನರು. ಅವರ ಶಿಫಾರಸಿನಂತೆ ಹದಿನೇಳು ವರ್ಷಗಳ ಹಿಂದೆ ಪೆರ್ಣಂಕಿಲ ದೇವಸ್ಥಾನದ ಗಣಪತಿಯ ಸನ್ನಿಧಾನದಲ್ಲಿ ಮಠಕ್ಕೆ ಸೇರಿಕೊಂಡೆ. ಅಂದಿನಿಂದ ಇಂದಿನವರೆಗೆ ಸ್ವಾಮಿಗಳ ಜೊತೆಗಿದ್ದುದರಿಂದ ನನಗೆ ಶ್ರೀಗಳವರಲ್ಲಿ ಅತ್ಯಂತ ಆತ್ಮೀಯತೆ ಬೆಳೆದಿದೆ.

ಆಗ ಫಲಿಮಾರು ಸ್ವಾಮಿಗಳು ನನ್ನನ್ನು ಧಾರವಾಡಕ್ಕೆ ಕರೆಸಿದ್ದರು. ಅಲ್ಲಿ ಬಿದ್ದು ನನ್ನ ಕಾಲು ಮುರಿಯಿತು. ಕೂಡಲೇ ಕಾರಿನಲ್ಲಿ ಹುಬ್ಬಳ್ಳಿಗೆ ಕಳುಹಿಸಿ ಚಿಕಿತ್ಸೆ ನಡೆಸಿದರು. ನಡೆಯಲು ಆಗುತ್ತಿರಲಿಲ್ಲ. ನಾನು ಊರಿಗೆ ಹೋಗುತ್ತೇನೆಂದು ಕೇಳಿದೆ. ಆಗ ಸ್ವಾಮಿಗಳು ಹೇಳಿದ ಮಾತನ್ನು ನಾನು ಎಂದೂ ಮರೆಯುವಂತಿಲ್ಲ. ''ಉಡುಪಿಯಲ್ಲಿ ಸುಖವಾಗಿದ್ದ ನಿಮ್ಮನ್ನು ಇಲ್ಲಿಗೆ ಕರೆಸಿದೆ. ಈಗ ಕಾಲು ಮುರಿದುಕೊಂಡಿರುವ ಈ ಅವಸ್ಥೆಯಲ್ಲಿ ನಿಮ್ಮನ್ನು ಉಡುಪಿಗೆ ಕಳಿಸಲು ನನ್ನ ಮನಸ್ಸು ಒಪ್ಪುತ್ತಿಲ್ಲ.''

ನಾನು ಅನಾರೋಗ್ಯದಲ್ಲಿದ್ದಾಗ ಶ್ರೀಗಳವರು ಎರಡು ಮೂರು ಬಾರಿ ನನ್ನ ಮನೆಗೆ ಬಂದು ವಿಚಾರಿಸಿಕೊಂಡು ಹೋಗಿದ್ದರು. ಅನೇಕ ಬಾರಿ ಆರ್ಥಿಕ ಸಹಾಯವನ್ನು ಮಾಡಿದ್ದರು. ಮಗಳ ಮದುವೆಯ ಚಿಂತೆಯಲ್ಲಿದ್ದಾಗ ನನಗೆ ಆಶೀರ್ವದಿಸಿ ಒಂದೂವರೆ ವರ್ಷಗಳ ಕಾಲ ಅದಕ್ಕಾಗಿಯೇ ವಿಶ್ರಾಂತಿಯನ್ನು ಕೊಟ್ಟಿದ್ದರು. ಮಗಳ ಮದುವೆಯಾದಾಗ ನನ್ನಷ್ಟೆ ಸಂತೋಷ ಶ್ರೀಗಳವರಿಗೂ ಆಗಿತ್ತು.

ಶ್ರೀಗಳವರ ಜೊತೆಗಿದ್ದು ಕೆಲವು ದಿನ ಅವರನ್ನು ಬಿಟ್ಟಿದ್ದರೆ ನನಗೂ ಅವರದೇ ಯೋಚನೆ. ರಾತ್ರಿ ಅವರೊಂದಿಗೆ ಮಾತನಾಡುವಂತೆ ಸ್ವಪ್ನ. ''ಆವು ಸ್ವಾಮಿ ಆವು'' ಎಂದು ಕನಸಿನ ಮಾತು ಕೇಳಿ ಮನೆಯವರೆಲ್ಲ ನಕ್ಕಿದ್ದರು.

ಹೀಗೆ ನನ್ನ ತಂದೆಯ ಸ್ಥಾನದಲ್ಲಿದ್ದವರು ಸ್ವಾಮಿಗಳು.

ಸ್ವಾಮಿಗಳಿಗೆ ಕೋಪ ಮಾತ್ರ ಬಹಳ ಬೇಗ. ಕೈಗೆ ಸಿಕ್ಕಿದ ವಸ್ತುಗಳ ಮೇಲೆ ಸಿಟ್ಟನ್ನು ತೀರಿಸಿಕೊಳ್ಳುತ್ತಾರೆ. ಒಮ್ಮೆ ನನ್ನ ಮೇಲಿನ ಸಿಟ್ಟಿನಿಂದ ಹೊಸ ಪೆನ್ನೊಂದನ್ನು ಛಟ್ಟನೆ ಮುರಿದಿದ್ದರು. ಆದರೆ ಕ್ಷಣದಲ್ಲಿ ಶಾಂತರಾಗುತ್ತಾರೆ. ''ನಾನು ದುಡುಕಿದ್ದಕ್ಕೆ ನಿಮಗೆ ಬೇಸರವಾಯಿತೆ ?'' ಎಂದು ಕೇಳಿದಾಗ ನಮ್ಮ ಬೇಸರವೆಲ್ಲಾ ಇಳಿದು ಹೋಗುತ್ತದೆ.

ನಾಯಿ ಎಂದರೆ ತುಂಬಾ ಭಯ ನಮ್ಮ ಸ್ವಾಮಿಗಳಿಗೆ. ಬಾದಾಮಿಗೆ ಹೋಗುವ ದಾರಿ. ಒಂದು ಕೆರೆಯ ಬುಡದಲ್ಲಿ ಸಂಧ್ಯಾವಂದನೆಗೆ ಕೂತಿದ್ದರು ಸ್ವಾಮಿಗಳು. ಮಠದವರು ಪಕ್ಕದಲ್ಲೇ ಬೆಲ್ಲ ಕಾಯಿಸುವಲ್ಲಿಗೆ ಹೋಗಿ ಕಬ್ಬಿನ ಹಾಲು ತೆಗೆದುಕೊಳ್ಳುತ್ತಿದ್ದರು. ತರ್ಪಣ ಮುಗಿಸಿ ಶ್ರೀಗಳವರು ವಾಹನದತ್ತ ಹೊರಟಿದ್ದರು. ಎಲ್ಲೋ ಇದ್ದ ನಾಯಿಗಳು ಬೊಗಳುತ್ತ ಸುತ್ತುಗಟ್ಟಿದವು. ಶ್ರೀಗಳವರು ತುಂಬಾ ಹೆದರಿದ್ದರು. ಸಿಟ್ಟು ಬಂದಿತ್ತು. ಎದುರಿಗೆ ಸಿಕ್ಕಿದ ನನ್ನನ್ನು ಕೇಳಿದರು. ''ಉಳಿದವರೆಲ್ಲಿ ?'' ವಿಷಯ ತಿಳಿಸಿದೆ. ಕಾರಿನಲ್ಲಿ ಹೋಗುತ್ತ ಸಿಡುಕಿದರು – ''ಕಬ್ಬಿನ ಹಾಲನ್ನು ಕುಡಿಯುವುದು ಬೇಡ. ಈಗಲೇ ಚೆಲ್ಲಿ''. ''ಆಗಲಿ ಸ್ವಾಮಿ'' ಎಂದು ತಂಬಿಗೆಯನ್ನು ಕಾರಿನ ಹೊರಗೆ ಬೋರಲು ಹಿಡಿದೆ. ಶ್ರೀಗಳವರು ಸುಮ್ಮನಾದರು. ಆದರೆ ಚೆಲ್ಲಿದ್ದು ಕಬ್ಬಿನ ಹಾಲನ್ನಲ್ಲ, ಬೇರೊಂದು ತಂಬಿಗೆಯಲ್ಲಿದ್ದ ನೀರನ್ನು.

ಇತ್ತೀಚೆಗೆ ಹೈದರಾಬಾದಿನಲ್ಲಿ ಆಶ್ಚರ್ಯಕರವಾದ ಘಟನೆಯೊಂದು ನಡೆಯಿತು. ಪಲಿಮಾರು ಸ್ವಾಮಿಗಳಿಗೆ ನಾಣ್ಯಗಳಿಂದ ತುಲಾಭಾರ ನಿಶ್ಚಿತವಾಗಿತ್ತು. ಪೂರ್ವಭಾವಿಯಾಗಿ ಸ್ವಾಮಿಗಳ ಭಾರವನ್ನು ನಿಶ್ಚೈಸಿ ನಾಣ್ಯಗಳನ್ನು ಸಂಗ್ರಹಿಸಲಾಗಿತ್ತು. ಆದರೆ ತುಲಾಭಾರ ಸಂದರ್ಭದಲ್ಲಿ ಎಷ್ಟು ಹಾಕಿದರೂ ಸ್ವಾಮಿಗಳ ತಕ್ಕಡಿ ಮೇಲೇಳಲಿಲ್ಲ. ಅಲ್ಲಿ ಇಲ್ಲಿ ಇದ್ದ ನಾಣ್ಯಗಳನ್ನೆಲ್ಲಾ ಸಂಗ್ರಹಿಸಿ ಹಾಕಲಾಯಿತು. ಆದರೂ

ಶ್ರೀಗಳವರ ಭಾರವೇ ಹೆಚ್ಚಾಗಿತ್ತು. ಪಕ್ಕದಲ್ಲಿದ್ದ ಪೇಜಾವರ ಸ್ವಾಮಿಗಳು ಒಂದು ಬೊಗಸೆ ನಾಣ್ಯ ತೆಗೆದು ತಕ್ಕಡಿಯಲ್ಲಿ ಹಾಕಿದರು. ಸ್ವಾಮಿಗಳ ತಕ್ಕಡಿ ಜಗ್ಗನೆ ಮೇಲೆದ್ದಿತು. ''ನಿಮ್ಮಿಂದ ನನಗೆ ಬಹಳ ನಷ್ಟವಾಯಿತು'' ಎಂದು ಹಾಸ್ಯ ಮಾಡಿದರು ಪಲಿಮಾರು ಶ್ರೀಪಾದರು. ಇದು ಶ್ರೀಗಳವರ ಗುರುಭಕ್ತಿಗೆ ಒಂದು ನಿದರ್ಶನ.

ಅಷ್ಟೇ ಶಿಷ್ಯವತ್ಸಲರು ಸ್ವಾಮಿಗಳು. ವಿದ್ಯಾಪೀಠದ ವಿದ್ಯಾರ್ಥಿಗಳಲ್ಲಿ ತಾಯಿಯ ವಾತ್ಸಲ್ಯ ಅವರಿಗೆ. ತಾ. ೨೨-೯-೮೩ರಂದು ಬೆಂಗಳೂರಿನಿಂದ ಚಾತುರ್ಮಾಸ್ಯ ಮುಗಿಸಿ ಸ್ವಾಮಿಗಳು ಹೊರಟಿದ್ದರು. ಕಾರಿನಲ್ಲಿ ಮುಂಭಾಗದಲ್ಲಿ ನಾನು ಕೂತಿದ್ದೆ. ಇದ್ದಕ್ಕಿದ್ದಂತೆ ಹಿಂಬದಿಯಿಂದ ಅಳುದನಿ ಕೇಳಿಸಿತು. ಹಿಂತಿರುಗಿದರೆ ಸ್ವಾಮಿಗಳ ಮುಖ ಕೆಂಪಾಗಿತ್ತು. 'ಏನಿದು ಸ್ವಾಮಿ' ಎಂದೆ. ''ವಿದ್ಯಾಪೀಠ... ಮಕ್ಕಳು... ಇನ್ನೆರಡು ವರ್ಷ ನಾನು ಈ ಕಡೆ ಬರುವಂತಿಲ್ಲ'' ಎಂದು ಗದ್ಗದಿತರಾಗಿ ನುಡಿದರು. ಸ್ವಾಮಿಗಳಿಗೆ ಮಾತೃಶ್ರೀಯವರ ವಿಯೋಗವಾದಾಗಲೂ ನಾನಿದ್ದೆ. ಆಗಲೂ ದೃಢಮನಸ್ಕರಾಗಿದ್ದರು. ಹೀಗಾಗಿರಲಿಲ್ಲ. 'ಅಯ್ಯೋ ಸ್ವಾಮಿಗಳ ಮನಸ್ಸೇ' ಎಂದುಕೊಂಡೆ. ಈ ರೀತಿಯ ಸಹೃದಯಿ, ಪರೋಪಕಾರಿ, ವಿಶ್ವಕುಟುಂಬಿ ಸ್ವಾಮಿಗಳು ನಮ್ಮ ಸಮಾಜಕ್ಕೆ ದೊರೆತದ್ದು ದೊಡ್ಡ ಭಾಗ್ಯ.''

ನರಸಿಂಹ ಭಟ್ಟರು ಮಠದ ಕ್ರಿಯಾಶೀಲ ಕಾರ್ಯದರ್ಶಿಗಳು. ತುರ್ತುಪರಿಸ್ಥಿತಿಯಲ್ಲಿ ಮಠದ ಎಲ್ಲಾ ಕೆಲಸಗಳನ್ನು ಮಾಡಬಲ್ಲ ಸಮರ್ಥರು. ಶ್ರೀಗಳವರಂತೆಯೇ ನಿರಂತರ ಕಾರ್ಯನಿರ್ವಹಿಸುವಲ್ಲಿ ದಕ್ಷರು.

ಅವರ ಅನಿಸಿಕೆ ಇದು –

''ಸ್ವಾಮಿಗಳ ಎರಡನೇ ಪರ್ಯಾಯದಲ್ಲಿ ಸಂಜೆ ಕಾಲೇಜಿಗೆ ಹೋಗುತ್ತಿದ್ದ ನಾನು ಶ್ರೀಕೃಷ್ಣ ಮಠದಲ್ಲಿ ಕಾರ್ಯಾಲಯಕ್ಕೆ ಕೆಲಸಕ್ಕೆ ಸೇರಿದೆ. ಆಗ ನನ್ನ ಚಟುವಟಿಕೆಗಳನ್ನು ಗಮನಿಸಿದ ಶ್ರೀಗಳವರು ತಮ್ಮ ಪರ್ಯಾಯ ಮುಗಿಸಿ ಆರು ತಿಂಗಳ ಮಟ್ಟಿಗೆ ನನ್ನನ್ನು ಕರೆದು ಜೊತೆಗೆ ಸೇರಿಸಿಕೊಂಡರು. ಶ್ರೀಗಳವರ ಕೆಲಸ ಪೂರೈಸಿಕೊಂಡು ಬರಬಹುದೆಂಬ ಧೈರ್ಯದಿಂದ ಅವರನ್ನು ಸೇರಿಕೊಂಡೆ. ಈಗ ಹದಿನೈದು ವರ್ಷದಿಂದ ಮಠದ ಕಾರ್ಯವನ್ನೇ ನಿರ್ವಹಿಸುತ್ತಿದ್ದೇನೆ.

ಕರ್ನಾಟಕದಲ್ಲೇ ಅತ್ಯಂತ ತೃಪ್ತಿಕರವಾಗಿ ಸಾಮಾಜಿಕ ಸೇವಾಕಾರ್ಯಗಳನ್ನು ಮಾಡುತ್ತಿರುವ ಪೀಠಾಧಿಪತಿಗಳು ಪೇಜಾವರ ಮಠಾಧೀಶರು. ದಿನಕ್ಕೆ ಹದಿನೆಂಟು ಗಂಟೆಗಿಂತಲೂ ಹೆಚ್ಚು ಸಮಯ ಕಾರ್ಯವೆಸಗುತ್ತಿರುವ ಶ್ರೀಗಳವರು ಚಿಕ್ಕಪುಟ್ಟ ಕಾರ್ಯಗಳ ಬಗ್ಗೆಯೂ ಅಲಕ್ಷ್ಯ ತೋರುವುದಿಲ್ಲ. ಪ್ರಯಾಣ ಕಾಲದಲ್ಲೂ ವಾಹನದಲ್ಲೇ ಪತ್ರ ವ್ಯವಹಾರದ ಕಾರ್ಯಕ್ರಮ ನಡೆಯುತ್ತವೆ.

ಹಳೇಹಾಳ ಒಂದು ಗ್ರಾಮ. ಪರ್ಯಾಯ ಸಂಚಾರದಲ್ಲಿ ಶ್ರೀಗಳವರು ಅಲ್ಲಿ ಸಂದರ್ಶನಕ್ಕಾಗಿ ಕೇವಲ ಹದಿನೈದು ನಿಮಿಷಗಳನ್ನಿಟ್ಟಿದ್ದರು. ಭಕ್ತರು ಬಹಳ ಸಂಖ್ಯೆಯಲ್ಲಿ ಸೇರಿದ್ದರು. ಮೆರವಣಿಗೆಯಲ್ಲಿ ಶ್ರೀಗಳವರನ್ನು ಕರೆದೊಯ್ಯಬೇಕೆಂದು ಜನರ ಅಪೇಕ್ಷೆ. ಶ್ರೀಗಳವರು ಸಮಯವಿಲ್ಲವೆಂದು ನಿರಾಕರಿಸಿದರು. ತಾವು ಕಾರಲ್ಲಿ ಬನ್ನಿ. ನಾವು ನಡೆದುಕೊಂಡು ಬರುತ್ತೇವೆಂದರು ಜನರು. ಅದು ನನಗೆ ಸಂಕೋಚವಾಗುತ್ತದೆ ಎಂದು ಕೊನೆಗೂ ಮೆರವಣಿಗೆಗೆ ಒಪ್ಪಿದರು. ಸಮಯವಿಲ್ಲ, ಶ್ರೀಗಳವರು ಓಡುತ್ತ ಹೋದರು. ಜನರೂ ಹಿಂದಿನಿಂದ ಓಡಿದರು. ಇದೊಂದು ರೀತಿಯ ಓಟದ ಮೆರವಣಿಗೆಯಾಯಿತು. ಹೀಗಿದೆ ಶ್ರೀಗಳವರ ಕಾರ್ಯದ ಒತ್ತಡ.

ಶ್ರೀಗಳವರು ಯಾವುದೇ ಸಂಸ್ಥೆಯನ್ನು ಹಣವಿದ್ದು ಕಟ್ಟುವುದಲ್ಲ. ಸಂಸ್ಥೆಯನ್ನು ಆರಂಭಿಸಿ ಬಳಿಕ ಆರ್ಥಿಕ ಸುಭದ್ರತೆಯನ್ನು ಬೆಳೆಸುತ್ತಾರೆ. ಯಾವುದೇ ವಿಧವಾದ ಸೇವಾ ಕಾರ್ಯವನ್ನು ಬಯಸುವವರಿಗೂ ಶ್ರೀಗಳವರಲ್ಲಿ ಅವಕಾಶವಿದೆ. ಲೌಕಿಕ ಸಂಸ್ಥೆಯಿದೆ. ವೈದಿಕ ಪಾಠಶಾಲೆಯಿದೆ. ವೈದ್ಯಕೀಯ ಸಂಸ್ಥೆಯಿದೆ. ಜನತಾ ಕಲ್ಯಾಣ ನಿಧಿಯಿದೆ. ದೇವಸ್ಥಾನಗಳಿವೆ, ಅನಾಥಾಲಯದ ಯೋಜನೆಯಿದೆ. ಆದರೆ ಜನರು

ಯಾವ ಉದ್ದೇಶಕ್ಕಾಗಿ ಸಹಾಯ ಸಲ್ಲಿಸುತ್ತಾರೋ ಅದನ್ನು ಅದಕ್ಕಾಗಿಯೇ ವಿನಿಯೋಗಿಸುತ್ತಾರೆ. ಯಾವುದೇ ರೀತಿಯಿಂದ ದುಂದು ವೆಚ್ಚವಾಗದಂತೆ ಎಚ್ಚರವಹಿಸುತ್ತಾರೆ.

ಕೆಲವೊಮ್ಮೆ ಅವಿರತವಾಗಿ ದುಡಿದು ಬೇಸತ್ತಾಗ ಚಿಕ್ಕ ವಿಷಯಗಳ ಬಗ್ಗೆ ಶ್ರೀಗಳವರು ವಿರೋಧಿಸಿ ಬೇಸರಪಟ್ಟರೆ ಈ ಕಾರ್ಯದಿಂದ ನಿರ್ಗಮಿಸಬೇಕು ಅನಿಸಿದ್ದಿದೆ. ಆದರೆ ಶ್ರೀಗಳವರ ಪ್ರೀತಿ, ಅಭಿಮಾನ, ಹೃದಯ ನೈರ್ಮಲ್ಯಗಳನ್ನು ಕಂಡು ಸಮಾಧಾನ ಪಟ್ಟುಕೊಳ್ಳುತ್ತಿದ್ದೆ. ಅವರ ಸದ್ಗುಣಗಳು ನನ್ನನ್ನು ಆಮೇಲೆ ನಾಚಿಸಿದ್ದವು.''

ಇಪ್ಪತ್ತೆಂಟು ವರ್ಷಗಳಿಂದ ಮಠದ ವಾಹನ ಚಾಲಕರಾಗಿದ್ದವರು ಶ್ರೀ ಶಂಕರ ಶೆಟ್ಟರು. ಸದ್ಯ ನಿವೃತ್ತರು. ಅವರು ಹೀಗನ್ನುತ್ತಾರೆ–

ದಣಿಗಳ ಜ್ಞಾಪಕಶಕ್ತಿ ಆಶ್ಚರ್ಯ ಮಾರಾಯರೇ ! ಒಂದೂರಿನಲ್ಲಿ ಒಮ್ಮೆ ಒಬ್ಬರ ಮನೆಗೆ ಹೋದರೆ ಸಾಕು. ನನಗೆ ದಾರಿ ಮರೆತರೂ ಸ್ವಾಮಿಯವರು ರಸ್ತೆ ತಿಳಿಸುತ್ತಾರೆ.

ವಾಹನ ಮಠದ್ದಾದರೂ ಶ್ರೀಗಳವರು 'ಶಂಕರ ಇಷ್ಟು ಮಂದಿ ಕೂಡಬಹುದಾ? ಭಾರ ಹೆಚ್ಚಾಯಿತಾ?' ಎಂದು ಕೇಳುತ್ತಿದ್ದರು. ಒಮ್ಮೆ ಉತ್ತರ ಭಾರತದ ಸಂಚಾರ. 'ಬರೇಲಿ' ಗುಡ್ಡಗಾಡಿನ ಪ್ರದೇಶ. ದರೋಡೆಕೋರರ ಹಾವಳಿ. ಅನೇಕ ವಾಹನಗಳನ್ನು ಜೊತೆ ಸೇರಿಸಿ ಪೊಲೀಸರ ರಕ್ಷಣೆಯಲ್ಲಿ ಕಳಿಸುವ ಏರ್ಪಾಡು ಮಾಡಲಾಗಿತ್ತು. ಆದರೆ ಹತ್ತು ಕಿ.ಮೀ.ಗೊಮ್ಮೆ ನಿಂತು ಹೋಗುವ ನಿಧಾನ ಪ್ರಯಾಣ ಅದು ಆದ್ದರಿಂದ ಆ ವ್ಯವಸ್ಥೆಯಿಂದ ನಾವು ಹೊರಬಿದ್ದೆವು. ಪೊಲೀಸರ ಪೂರ್ಣಜವಾಬ್ದಾರಿಯನ್ನು ನಮ್ಮ ಮೇಲೆ ಹೊರಿಸಿದ್ದಾರೆ. ಭಯಂಕರ ಕಾಡು, ಕಗ್ಗತ್ತಲು. ನಮ್ಮ ವಾಹನವಷ್ಟೇ ಚಲಿಸುತ್ತಿತ್ತು. ವಾಹನದಲ್ಲಿರುವವರೆಲ್ಲಾ ಉಸಿರು ಬಿಗಿಹಿಡಿದಿದ್ದರು. ಸ್ವಾಮಿಗಳಿಗೆ ಚಳಿಯಾಯಿತು. ಉಲ್ಲನ್ ಟೋಪಿ ಹುಡುಕಿದರು. ಸಿಕ್ಕಲಿಲ್ಲ. ಮಠದವರನ್ನು ಕೇಳಿದರು. ಯಾರೂ ಮಾತಾಡಲಿಲ್ಲ, ದಣಿಗಳು ವಾಹನವನ್ನು ನಿಲ್ಲಿಸಿ, ಟೋಪಿ ಹುಡುಕಿ, ಹಾಕಿಕೊಂಡೇ ಪ್ರಯಾಣ ಮುಂದುವರಿಸಿದರು.

'ಸುಧಾ' ವಿದ್ಯಾರ್ಥಿಗಳು ಶ್ರೀಗಳವರ ಜೊತೆಗೇ ಪ್ರಯಾಣ ಮಾಡುವವರು. ಮಠದಲ್ಲಿ ಪಾರಾಯಣ ಅವರ ಕರ್ತವ್ಯ. ಕೆಲವೊಮ್ಮೆ ಕ್ಯಾಷ್ ಜವಾಬ್ದಾರಿಯೂ ಅವರದೇ. ಅವರ ಅಭಿಪ್ರಾಯ ಇದು –

''ವಿದ್ಯಾರ್ಥಿಗಳೆಂದರೆ ಸ್ವಾಮಿಗಳಿಗೆ ಅತಿ ಸ್ನೇಹ, ಸಲುಗೆ, ತಪ್ಪು ಮಾಡಿದರೂ ಮನಸ್ಸಿಗೆ ನೋವಾಗದಂತೆ ಬುದ್ಧಿವಾದ. ನಮ್ಮ ಹೃದಯವನ್ನು ಗೆದ್ದು ನಮ್ಮನ್ನು ತಿದ್ದುತ್ತಾರೆ. ನಾವು ತಪ್ಪು ಮಾಡಿದರೆ ಪ್ರಾಯಶ್ಚಿತ್ತವಾಗಿ ಅವರು ಉಪವಾಸ ಕೂಡುತ್ತಾರೆ. ಸಂದರ್ಭ ಸಿಕ್ಕಾಗಲೆಲ್ಲಾ ಪಾಠವನ್ನು ಮರೆಯುವುದಿಲ್ಲ. ಭಿಕ್ಷೆಗೆ ಕೂಡಲು ಹತ್ತು ನಿಮಿಷ ತಡವಿದೆಯಾದರೂ ಆಗಲೇ ನಮ್ಮನ್ನು ಪಾಠಕ್ಕೆ ಕರೆಯುತ್ತಾರೆ. ಪಾಠವನ್ನು ದಿನನಿತ್ಯದ ಕಾರ್ಯಕ್ರಮವನ್ನಾಗಿ ಮಾಡಿಕೊಂಡಿದ್ದಾರೆ. ಒಮ್ಮೆ ಹಾವೇರಿಯಲ್ಲಿ ಕಾರ್ಯಕ್ರಮಗಳು ಮುಗಿದು ಮಲಗುವಾಗ ರಾತ್ರಿ ಹನ್ನೆರಡು ಗಂಟೆ. ಬೆಳಿಗ್ಗೆ ೪.೩೦ಕ್ಕೆ ಸ್ವಾಮಿಗಳು ಎದ್ದಿದ್ದರು. ಬಿಡುವಿಲ್ಲದ ಕಾರ್ಯಕ್ರಮ. ಪ್ರಯಾಣ, ಅಂದು ಭಿಕ್ಷೆ ಮುಗಿದಾಗ ಸಾಯಂಕಾಲ ೫.೩೦. ವಿಶ್ರಾಂತಿಯಿಲ್ಲ. ಅಂದು ಹಾನಗಲ್ಲಿನಲ್ಲಿ ಕಾರ್ಯಕ್ರಮ ಮುಗಿಸಿ ಬಂದಾಗ ರಾತ್ರಿ ಗಡಿಯಾರ ೧೨ ಬಾರಿಸಿತ್ತು. ಶ್ರೀಗಳವರು ಧಾವಿಸಿ ಬಂದು ವಿದ್ಯಾರ್ಥಿಗಳನ್ನು ಪಾಠಕ್ಕೆ ಕರೆದರು. ಗುರುಗಳು ಹಾಸ್ಯ ಮಾಡುವರೆಂದು ತಿಳಿದಿದ್ದ ನಮಗೆ ಪಾಠ ಪ್ರಾರಂಭಿಸಿದ ಮೇಲೆ ಆಶ್ಚರ್ಯವಾಯಿತು.''

ಶ್ರೀ ಕೃಷ್ಣಭಟ್ಟರು ಮಠದಲ್ಲಿ ಅಡಿಗೆಯ ಕೆಲಸದಲ್ಲಿದ್ದವರು. ಹದಿನೈದನೆಯ ವಯಸ್ಸಿನಲ್ಲಿ ನಾಲ್ಕು ರೂಪಾಯಿ ಸಂಬಳಕ್ಕಾಗಿ ಮಠ ಸೇರಿದವರು. ಸುಮಾರು ಮೂವತ್ತೆರಡು ವರ್ಷಗಳಿಂದ ಸ್ವಾಮಿಗಳ

ಆಶ್ರಯದಲ್ಲೇ ಇದ್ದವರು. ಸ್ವಾಮಿಗಳನ್ನು ಕುರಿತು ಅವರು ಹೀಗೆನ್ನುತ್ತಾರೆ–

''ನಾನು ನನ್ನ ಜಾತಕ ಪ್ರಕಾರವಾಗಿ ಅನಾಥಾಶ್ರಮದಲ್ಲಿ ಅಥವಾ ಗುರುಮಠದಲ್ಲಿ ಬಾಳುವೆ ಎಂದು ಮದ್ರಾಸಿನಲ್ಲಿ ದಿ। ಪಿ. ಪಿ. ಉಪಾಧ್ಯಾಯರು ತಿಳಿಸಿದ್ದರು. ಮುಂದೆ ನನ್ನ ಹದಿನೈದನೇ ವಯಸ್ಸಿನಲ್ಲಿ ನನ್ನ ತಾಯಿಯ ಜೊತೆ ಮದ್ರಾಸಿನಲ್ಲಿ ಕೃಷ್ಣಮಂದಿರಕ್ಕೆ ಸೇರಲು ಬಂದೆ. ಅಲ್ಲಿ ಶ್ರೀಗಳವರು ''ಮಗು ನೀನು ನನ್ನ ಮಠಕ್ಕೆ ಸೇರು'' ಎಂದು ಮಂತ್ರಾಕ್ಷತೆ ನೀಡಿದರು, ಅವರ ಮಾತಿನಂತೆ ನಾನು ಮಠಕ್ಕೆ ಸೇರಿದೆ. ಆಗ ಶ್ರೀಗಳವರು ತಮ್ಮ ಪ್ರಥಮ ಪರ್ಯಾಯವನ್ನು ಮುಗಿಸಿದ್ದರು.

ನನ್ನ ಮದುವೆಯ ಸಂದರ್ಭ. ನನ್ನಲ್ಲಿ ಸ್ವಲ್ಪವೂ ಧನವಿರಲಿಲ್ಲ. ಶ್ರೀಗಳವರು ಕೇವಲ ಮಂತ್ರಾಕ್ಷತೆಯ ಪ್ರಭಾವದಿಂದ ನನ್ನ ಮದುವೆ ಚೆನ್ನಾಗಿ ನಡೆಯುವಂತೆ ಅನುಗ್ರಹಿಸಿದರು, ಮದುವೆ ಹೇಗೆ ನಡೆಯಿತೆಂದು ಇಂದಿಗೂ ನನಗೆ ತಿಳಿದಿಲ್ಲ.

ಮಧ್ಯೆ ಕೆಲವೊಮ್ಮೆ ಮಠ ಬಿಡಬೇಕೆಂದು ಎಷ್ಟೋಸಾರಿ ಎಣಿಸಿ ಸ್ವಾಮಿಗಳವರ ಅನುಗ್ರಹ ಕೇಳಿದೆ. ಅವರು ಮೂರು ಬಾರಿಯೂ ಒಂದು ತಿಂಗಳ ಮಂತ್ರಾಕ್ಷತೆ ಎಂದೇ ನೀಡಿದರು. ಅದರಂತೆ ತಿಂಗಳ ನಂತರ ಹೇಗೋ ಏನೋ ಪುನಃ ಮಠಕ್ಕೆ ಸೇರುತ್ತಿದ್ದೆ.

ಅನೇಕ ಸಲ ಸ್ವಾಮಿಗಳು ಕೆಲವು ಕಾರಣಕ್ಕಾಗಿ ರಾತ್ರಿ ಫಲಾಹಾರ ಬಿಟ್ಟಾಗ ನಾನೂ ಬಿಡುತ್ತಿದ್ದೆ. ಬಿಹಾರದಲ್ಲಿ ಕ್ಷಾಮ ಪರಿಸ್ಥಿತಿ ಇದ್ದಾಗ ಸ್ವಾಮಿಗಳು ಒಂದೇ ಹಿಡಿ ಅಕ್ಕಿಯ ಅನ್ನ ತಿನ್ನುತ್ತಿದ್ದರು. ನಾನು ಅವರಿಗೆ ತಿಳಿಯದಂತೆ ಸ್ವಲ್ಪ ಹೆಚ್ಚು ಅಕ್ಕಿ ಹಾಕುತ್ತಿದ್ದೆ. ಆಗ ಯಾವ ಭಕ್ಷ್ಯಗಳನ್ನೂ ಸ್ವಾಮಿಗಳು ತಿನ್ನುತ್ತಿರಲಿಲ್ಲ.

ಕೆಲವೊಮ್ಮೆ ಅಡಿಗೆ ಕೆಟ್ಟುಹೋದಾಗ ಬೈದದ್ದೂ ಇದೆ. ಅಡಿಗೆ ಚೆನ್ನಾಗಿದ್ದಾಗ ಊಟ ಮಾಡುವಾಗಲೇ ಕರೆದು ''ಕೃಷ್ಣ ಅಡಿಗೆ ತುಂಬಾ ಚೆನ್ನಾಗಿದೆ'' ಎಂದದ್ದೂ ಇದೆ. ತುಂಬಾ ಮಿತಾಹಾರಿ ಸ್ವಾಮಿಗಳು. ಅರ್ಧ ಚಪಾತಿ ಜಾಸ್ತಿಯಾದರೂ ಅವರ ದೈಹಿಕ ಸ್ಥಿತಿ ವ್ಯತ್ಯಾಸವಾಗುತ್ತಿತ್ತು. ಹಾಲು ಅವರ ಪ್ರಧಾನ ಆಹಾರವಾದರೂ ಅವರು ಕುಡಿಯುವುದು ದಿನಕ್ಕೆ ಒಂದೋ ಎರಡೋ ಲೋಟ. ಇಂದಿಗೂ ಐದು ವರ್ಷದ ಮಗುವಿನ ಆಹಾರ ಸಾಕು. ಆದ್ದರಿಂದಲೇ ನಾನು ಇಷ್ಟು ಚಟುವಟಿಕೆಯಲ್ಲಿದ್ದೇನೆ, ಎನ್ನುತ್ತಾರೆ. ಒಬ್ಬ ಅಡಿಗೆ ಮಾಡುವವನ ಜೊತೆಗೂ ಸ್ವಾಮಿಗಳು ಸಲುಗೆಯಿಂದ, ಆತ್ಮೀಯತೆಯಿಂದ ಇದ್ದಾರೆ ಎಂದರೆ ನನ್ನ ಭಾಗ್ಯವೇ ಅಲ್ಲವೇ ?

('ಉಪಾಯನ', 'ತತ್ತ್ವವಾದ' ಪರ್ಯಾಯ ವಿಶೇಷಾಂಕ, ಜನವರಿ – ಫೆಬ್ರವರಿ, ೧೯೮೪.

ಸಂ. ಭಾರತೀರಮಣಾಚಾರ್ಯ.)

●

